Vol - 9 January 2010 Issue No. 01 Rs. 5.00/-



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine



## Wish You All A Very Happy & Prosperous New Year - 2010




**V.S Acharya, Hon'ble Minister for Home & District Incharge Minister, Udupi, Sri Gulihatti D. Shekar n'ble Minister for Textiles, Youth Services & Sports, Sri K. Raghupathi Bhat, MLA, Udupi, Sri Lalaji R. Mendon A, Kapu, Sri Kondajji B. Shanmukhappa, State Chief Commissioner, Sri Sudhakar Shetty, Chairman, UDA P. Rabindra Nayak, Patron, Sri R.S. Maben, President, Silas International School, Smt. Ravi Wesley, S.C.(G) & I.A. Kairanna, ASC(S) are seen at the Inaugural Function of the 33rd State Level Cub & Bulbul Utsav held at the as International School Campus, Udupi from 27th to 31st December 2009.**



**I.M. Vittala Murthy, I.A.S, Secretary to Government t. of Youth Services & Sports, Flagged off the ace March" on the occasion of the National Youth Day Birth Day of Swami Vivekananda held on 12th uary 2010 at the State Headquarters, Fort, Bangalore.**



**Sri. Shivananjaiah, KAS, Director, Dept. of Youth Services & Sports addressing the Valedictory Function of the National Youth Day and the Birth Day of Swami Vivekananda held on 12th January 2010 at the State Headquarters, Fort, Bangalore.**



ಉಡುಪಿಯಲ್ಲಿ ನಡೆದ 33ನೆಯ ರಾಜ್ಯಮಟ್ಟದ ಕಬ್ ಮತ್ತು ಬುಲ್‌ಬುಲ್ ಉತ್ಸವದ ಧ್ವಜಾರೋಹಣವನ್ನು ಶ್ರೀ ಗೂಳಿಹಟ್ಟಿ ಡಿ. ಶೇಖರ್, ಜವಳಿ, ಯುವಜನ ಸೇವಾ ಹಾಗೂ ಕ್ರಿಡಾ ಇಲಾಖೆ ಸಚಿವರು ನೇರವೇರಿಸುತ್ತಿರುವುದು.



ಕಬ್, ಬುಲ್ ಬುಲ್ ಉತ್ಸವದ ಪಥ ಚಲನವನ್ನು ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀಮತಿ ಶಾಂತ ವಿ. ಆಚಾರ್ಯ ಉದ್ಘಾಟಿಸುತ್ತಿರುವುದು.




ಉಡುಪಿಯಲ್ಲಿ ನಡೆದ 33ನೆಯ ರಾಜ್ಯಮಟ್ಟದ ಕಬ್ ಮತ್ತು ಬುಲ್‌ಬುಲ್ ಉತ್ಸವದ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿದ್ದ ಶ್ರೀಯುತ ಡಿ. ಪ್ರಾಣೇಶರಾವ್, ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ಉಡುಪಿ, ಶ್ರೀ ವಿಜಯ ಕುಮಾರ್ ಸೊರಕೆ, ಮಾಜಿ ಸಂಸತ್ ಸದಸ್ಯರು, ಶ್ರೀ ಗೋಕುಲ್ ದಾಸ್ ನಾಯಕ್, ಆಯುಕ್ತರು, ಉಡುಪಿ ನಗರ ಸಭೆ, ಶ್ರೀ ಪ್ರಮೋದ್ ಮಧ್ವರಾಜ್, ಕೈಗಾರಿಕೋದ್ಯಮಿ, ಶ್ರೀ ಡಿ. ಮಂಜುನಾಥ, ಕ್ಷೇತ್ರ ಶಿಕ್ಷಣಾಧಿಕಾರಿ, ಉಡುಪಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಪಿ. ರಬೀಂದ್ರ ನಾಯಕ್, ಪೋಷಕರು, ಶ್ರೀ ಕೆ.ಬಿ. ರಾವ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಶೇಖರ್ ಕೆ. ಪೂಜಾರಿ, ಜಿಲ್ಲಾ ಕಾರ್ಯದರ್ಶಿ, ಶ್ರೀ ಯು.ಎಸ್. ರಾಜಗೋಪಾಲಾಚಾರ್ ಹಾಗೂ ಸಿಸ್ಟರ್ ಬಿಬಿಯಾನ ಕ್ರಿಸ್ಟಿನಾ ಡೇಸಾ (ಉತ್ಸವದ ನಾಯಕರುಗಳು) ಇವರನ್ನು ಕಾಣಬಹುದು.




ಶ್ರೀ ಐ.ಎಮ್. ವಿಠಲ ಮೂರ್ತಿ, ಕಾರ್ಯದರ್ಶಿ, ಯುವಜನ ಸೇವೆ ಹಾಗೂ ಕ್ರಿಡಾ ಇಲಾಖೆ, ಕರ್ನಾಟಕ ಸರ್ಕಾರ, ಇವರು ದಿನಾಂಕ 12-01-2010ರಂದು ಕೇಂದ್ರ ಕಛೇರಿಯಲ್ಲಿ ನಡೆದ **'ರಾಷ್ಟ್ರೀಯ ಯುವದಿನ'** ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಿರುವುದು.



ಶ್ರೀಮತಿ ಎಂ.ಜಿ. ಬೋಪಯ್ಯ, ಉಪಾಧ್ಯಕ್ಷರು, ರಾಜ್ಯ ಸಂಸ್ಥೆ ಇವರು ದಿನಾಂಕ 12-01-2010ರಂದು ಕೇಂದ್ರ ಕಛೇರಿಯಲ್ಲಿ ನಡೆದ **'ರಾಷ್ಟ್ರೀಯ ಯುವದಿನ'** ಕಾರ್ಯಕ್ರಮದಲ್ಲಿ ಭಾಗವಹಿಸಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪ್ರಮಾಣ ಪತ್ರ ನೀಡುತ್ತಿರುವುದು.

# Editor's desk

The Scouting / Guiding has seen generations of over the last 100 years in every part of society / communities around the globe. We proudly said "Scouts create a better world" and girls worldwide say "100 years of changing lives" to mark the respective centenaries. The world jamboree had a theme "One World One Promise." All this leads to one world vide Mission of our Movement "to contribute to the education of young people, through a value system based on promise and law, to help build better world where people are self fulfilled as individuals and play a constructive role in society."

The Mission always has a vision and vision should have a goal / direction. We as key adult leaders in our respective fields of the great movement, have Mission and Vision set by many committees / leaders and volunteers / professionals at local / national / international levels. The responsibility remains with us, as we are executing the programme / training to achieve the mission.

Friends, it is very easy to say hundreds of things with beautiful narrations and explanations during our interactions / meetings / lectures / rallies, but the foundation of Scout / Guide movement are our units at grass root level. If we concentrate more on the working system of units whether in sponsored or open, in accordance with value based system laid down in APRO ii & iii (scheme) and experience of past hundred years, we hope to create another history of teaching more young people in coming century.

The Scout/Guide movement is for young and "......involve them throughout their years in a non formal Education process". Give space to young minds to express/decide what they want and how they want.

Let's respect their rights and make them to realize about their responsibility and belongingness to upcoming challenges/ problems in society.

Hope all the Unit Leaders/ HWB holders/Trainers and all adults will understand the Mission and work with Vision to reach more young people and help them.

M.A. KHALID
State Secretary

# ಮುಖ್ಯ ಆಯುಕ್ತರ ನುಡಿ....

ಮುಖ್ಯ ಆಯುಕ್ತರ ನುಡಿ....

ಮಾನ್ಯರೆ,

ದಿನಾಂಕ 27ನೇ ಡಿಸೆಂಬರ್‌ರಂದು ದಕ್ಷಿಣ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾರ್ಯಾಲಯದಲ್ಲಿ ಭೇಟಿ ಮಾಡಿ ಜಿಲ್ಲೆಯಲ್ಲಿನ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆ ಬಗ್ಗೆ ವಿಚಾರ ವಿನಿಮಯ ಮಾಡಿಕೊಂಡೆ. ಸಭೆಯಲ್ಲಿ ರಾಜ್ಯ ಗೈಡ್ಸ್ ಆಯುಕ್ತರಾದ ಕುಮಾರಿ ರವಿ ವೆಸ್ಲಿ ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ. ಎ. ಕೈರನ್ನ ಹಾಗೂ ಇತರ ಪದಾಧಿಕಾರಿಗಳು ಭಾಗವಹಿಸಿದ್ದರು.

ಡಿಸೆಂಬರ್ 27 ರಿಂದ 31ರ ವರೆವಿಗೆ ಉಡುಪಿಯ ಸೈಲಾಸ್ ಅಂತರಾಷ್ಟ್ರೀಯ ಶಾಲೆಯ ಆವರಣದಲ್ಲಿ ಅತ್ಯಂತ ಯಶಸ್ವಿಯಾಗಿ ಜರುಗಿದ 33ನೇ ರಾಜ್ಯ ಕಬ್ ಬುಲ್ ಬುಲ್ ಉತ್ಸವದಲ್ಲಿ ರಾಜ್ಯದ 25 ಜಿಲ್ಲೆಗಳಿಂದ ಭಾಗವಹಿಸಿದ 800 ಕಬ್-ಬುಲ್ ಬುಲ್‌ಗಳು ಅತ್ಯಂತ ಸಂತೋಷ ಸಂಭ್ರಮ ಉತ್ಸಾಹದಿಂದ ಐದು ದಿನ ಉತ್ಸವದಲ್ಲಿ ಭಾಗವಹಿಸಲು ಸಹಕರಿಸಿದ ಎಲ್ಲಾ ದಳನಾಯಕರುಗಳು/ನಾಯಕಿಯರು, ಸ್ಥಳೀಯ, ಜಿಲ್ಲೆ ಮತ್ತು ರಾಜ್ಯ ಸಂಸ್ಥೆಯ ವಿವಿಧ ಹಂತದ ಪದಾಧಿಕಾರಿಗಳು, ಜಿಲ್ಲಾಡಳಿತ-ಜಿಲ್ಲಾ ಪಂಚಾಯತ್, ಸಾರ್ವಜನಿಕ ಶಿಕ್ಷಣ ಇಲಾಖೆ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಉಡುಪಿ ನಗರಸಭೆ, ಸಂಘ-ಸಂಸ್ಥೆಗಳು, ಸಂಸ್ಥೆಯ ಹಿತಚಿಂತಕರು, ವಿವಿಧ ದೇಗುಲಗಳು, ದಾನಿಗಳು ಹಾಗೂ ಹಗಲಿರುಳು ಸೇವೆಸಲ್ಲಿಸಿದ ಸ್ಕೌಟ್-ಗೈಡ್ ಚಳವಳಿಯ ಸಹೋದ್ಯೋಗಿಗಳ ಸಹಾಯ-ಬೆಂಬಲ-ಸಹಕಾರಗಳಿಂದ ಅತ್ಯುತ್ತಮವಾಗಿ ಉತ್ಸವ ಜರುಗಲು ನೆರವಾದ ಎಲ್ಲರಿಗೂ ನನ್ನ ನಮನಗಳು.

ವಿಶಾಲವಾದ ಸೈಲಾಸ್ ಶಾಲೆಯ ಆವರಣ. ಶಾಲಾ ಕೊಠಡಿಗಳು, ಆಟದ ಮೈದಾನ, ಅಗತ್ಯವಾದ ಅಡುಗೆ ಮತ್ತು ಊಟದ ಕೋಣೆ, ಉತ್ಸವದ ಯಶಸ್ಸಿಗೆ ಮೆರಗು ನೀಡಿದವು. ಶಾಲೆಯ ಆಡಳಿತ ಮಂಡಳಿ ಹಾಗೂ ಸಿಬ್ಬಂದಿಯ ಸಹಕಾರಕ್ಕೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ಕಬ್-ಬುಲ್‌ಬುಲ್‌ಗಳು ವಿಶೇಷವಾಗಿ ನಿರ್ಮಿಸಿದ ಸಾಹಸ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಿಕೆ, ಪ್ರೇಕ್ಷಣೀಯ ಸ್ಥಳಗಳ ಪ್ರವಾಸ, ಜಾನಪದ ನೃತ್ಯ, ಪ್ರತಿಭಾ ಪ್ರದರ್ಶನ, ಯಕ್ಷಗಾನ ಪ್ರದರ್ಶನ, ಮಕ್ಕಳ ರಂಗಭೂಮಿ ಚಟುವಟಿಕೆ, ಗಾಳಿಪಟ ರಚನೆ, ಕಾಡಿನ ಕುಣಿತ, ತಾರಾಕಥೆ, ಸರ್ವಧರ್ಮ ಪ್ರಾರ್ಥನೆ, ಶ್ರೀ ಕೃಷ್ಣ ದೇಗುಲ ದರ್ಶನ, ಪ್ರಸಾದ, ವಜ್ರ ನವರತ್ನಖಚಿತ ನೂತನ ರಥದರ್ಶನ, ಊಟದ ಹಾಗೂ ಶೌಚಾಲಯದ ವ್ಯವಸ್ಥೆ ಎಲ್ಲವೂ ಅಚ್ಚುಕಟ್ಟಾಗಿದ್ದು, ಎಲ್ಲ ಕಬ್, ಬುಲ್ ಬುಲ್‌ಗಳು ಕುಣಿದು, ಕುಪ್ಪಳಿಸಿ ಆನಂದಪಟ್ಟಿರುವುದು ನಾವೆಲ್ಲರು ಹೆಮ್ಮೆಪಡುವ ವಿಷಯ. ನಾನು ಉತ್ಸವದಲ್ಲಿ ಸಕ್ರಿಯವಾಗಿ ಭಾಗವಹಿಸಿ ಸಂತೋಷಪಟ್ಟಿದ್ದೇನೆ.

ದಿನಾಂಕ 13 ಜನವರಿಯಂದು ಬೆಂಗಳೂರು ಉತ್ತರ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಉತ್ತರ ಕರ್ನಾಟಕದ ನೆರೆ ಸಂತ್ರಸ್ತರ ನಿಧಿಗೆ ಸಂಗ್ರಹಿಸಿದ ರೂ. 1,01,021/- ಗಳನ್ನು ರಾಜ್ಯ ಸಂಸ್ಥೆಗೆ ನೀಡಲು ಸ್ಟೇಸಿ ಮೆಮೋರಿಯಲ್ ಶಾಲೆಯಲ್ಲಿ ಏರ್ಪಡಿಸಿದ ಸಮಾರಂಭದಲ್ಲಿ ಭಾಗವಹಿಸಿ, ಜಿಲ್ಲೆಯ ಸ್ಕೌಟ್‌ಗೈಡ್‌ಗಳು, ದಳನಾಯಕರುಗಳು, ಜಿಲ್ಲೆಯ ವಿವಿಧ ಶಾಲೆಗಳು, ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕರಿಂದ ಸಂಗ್ರಹಿಸಿದ ನಿಧಿಯ ಹಣವನ್ನು ಪಡೆದು ಈ ಮಹತ್ಕಾರ್ಯದಲ್ಲಿ ಸಹಕರಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳನ್ನು ತಿಳಿಸಿದ್ದೇನೆ. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎ. ದೇವಪ್ರಕಾಶ್, ಆಯುಕ್ತರುಗಳಾದ ಶ್ರೀ ಪ್ರೇಂಕುಮಾರ್ - ಶ್ರೀಮತಿ ವನಿತಾ ನಾರಾಯಣ್, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಕೆ. ಶೇಷಾದ್ರಿ, ಜಿಲ್ಲಾ ಸಂಘಟಕರ ಶ್ರೀ ಎ.ಎಂ. ಶಂಕರ್, ಶಾಲೆಯ ಪ್ರಾಂಶುಪಾಲರು ಹಾಗೂ ಸ್ಥಾನಿಕ ಆಯುಕ್ತರಾದ ಶ್ರೀ ಕ್ರಿಬಾನಂದನ್ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಜಿಲ್ಲೆಯ ಎಲ್ಲಾ ಹಂತದ ಪದಾಧಿಕಾರಿಗಳು, ಸ್ಕೌಟರ್-ಗೈಡರ್‌ಗಳು, ಸ್ಕೌಟ್ಸ್-ಗೈಡ್ಸ್‌ಗಳು ಸಭೆಯಲ್ಲಿ ಭಾಗವಹಿಸಿದರು.

ದಿನಾಂಕ 14-01-2010 ರಂದು ತಮಿಳುನಾಡಿನ ತಿರುಚನಾಪಳ್ಳಿಯಲ್ಲಿ ದಕ್ಷಿಣ ರೈಲ್ವೆ ರಾಜ್ಯ ಸಂಸ್ಥೆ ಗೋಲ್ಡನ್ ರಾಕ್ ಗ್ರೌಂಡ್ಸ್‌ನಲ್ಲಿ ಏರ್ಪಡಿಸಿದ್ದ 14ನೇ ರಾಷ್ಟ್ರೀಯ ರೈಲ್ವೇ ಸ್ಕೌಟ್ಸ್ ಗೈಡ್ಸ್ ಜಾಂಬೂರಿಯಲ್ಲಿ ಭಾಗವಹಿಸಿ ದೇಶದ 16 ರೈಲ್ವೇ ರಾಜ್ಯಗಳಿಂದ ಆಗಮಿಸಿದ್ದ 2000ಕ್ಕೂ ಹೆಚ್ಚಿನ ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಾಗೂ ತರಬೇತಿ ನಾಯಕರುಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ನಾನು ಮತ್ತು ರಾಜ್ಯ ಕಾರ್ಯದರ್ಶಿ ಶ್ರೀಎಂ.ಎ. ಖಾಲಿದ್ ಅಭಿನಂದಿಸಿ -ಶುಭಾಶಯಕೋರಿದ್ದೇವೆ.

ದಿನಾಂಕ 23 ಜನವರಿಯಂದು ಮಂಡ್ಯ ಜಿಲ್ಲಾ ಸಂಸ್ಥೆಗೆ ಭೇಟಿನೀಡಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳೊಂದಿಗೆ ಜಿಲ್ಲೆಯಲ್ಲಿ 2009-10 ರಲ್ಲಿ ಆಗಿರುವ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿ, ಇನ್ನೂ ಆಗಬೇಕಾಗಿರುವ ಮೂಲ ತರಬೇತಿ ಬಗ್ಗೆ ಹಾಗು ಕಾರ್ಯಚಟುವಟಿಕೆಗಳನ್ನು ಹೆಚ್ಚಿಸಲು ತಕ್ಷಣ ಕ್ರಮಕೈಗೊಳ್ಳಲು ಸೂಚಿಸಿದ್ದೇನೆ.

ಅಚಿದೇ ಮೈಸೂರು ಜಿಲ್ಲಾ ಸಂಸ್ಥೆಯವರು ಏರ್ಪಡಿಸಿದ್ದ 4 ಮೂಲ ತರಬೇತಿ ಶಿಬಿರ ಹಾಗೂ 2 ಮುಂದುವರೆದ ತರಬೇತಿ ಶಿಬಿರಗಳ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿ ಎಲ್ಲಾ ಅಭ್ಯರ್ಥಿಗಳು ಘಟಕ-ದಳ ತೆರೆಯುವುದರೊಂದಿಗೆ ಚಳವಳಿಯ ಹೆಚ್ಚಿನ ತರಬೇತಿ ಪಡೆಯಲು ಸೂಚಿಸಿ ಶುಭ ಹಾರೈಸಿದ್ದೇನೆ. ಎರಡೂ ಸಭೆಗಳಲ್ಲಿ ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀಮತಿ ಬಿ.ವಿ. ರಾಮಲತಾ ಭಾಗವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಗೈಡ್ ಆಯುಕೆ ಡಾ. ಕಮಲಾ ರಾಮನ್, ಜಿಲ್ಲಾ ಕಾರ್ಯದರ್ಶಿ, ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಈಪನ್ ಹಾಗು ಜಿಲ್ಲೆಯ ಎಲ್ಲ ಪದಾಧಿಕಾರಿಗಳು ತರಬೇತಿ ನಾಯಕರುಗಳು ಹಾಗೂ ತರಬೇತಿ ಪಡೆದ 66 ಅಭ್ಯರ್ಥಿಗಳು ಸಭೆಯಲ್ಲಿ ಭಾಗವಹಿಸಿದರು.

ಹಲವಾರು ಜಿಲ್ಲೆಗಳಲ್ಲಿ ಡಯಟ್ ನೆರವಿನಿಂದ ತರಬೇತಿ ಕಾರ್ಯಕ್ರಮ ಜರುಗಬೇಕಾಗಿದೆ. ಈ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಪದಾಧಿಕಾರಿಗಳು ಹಾಗೂ ಜಿಲ್ಲಾ ಸಂಘಟಕರುಗಳು ತಕ್ಷಣ ಕ್ರಮ ಕೈಗೊಳ್ಳಲು ಸೂಚಿಸುತ್ತೇನೆ.

ಈಗಾಗಲೇ ರಾಜ್ಯ ಸಂಸ್ಥೆಯ ಹಲವಾರು ಸುತ್ತೋಲೆಗಳಲ್ಲಿ ಸೂಚಿಸಿದಂತೆ ಹಲವಾರು ಜಿಲ್ಲೆಗಳು ಸಹಾಯಕ ಜಿಲ್ಲಾ ಆಯುಕ್ತರುಗಳು, ಸ್ಥಾನಿಕ ಆಯುಕ್ತರುಗಳ ನೇಮಕ ಮಾಡಲು ರಾಜ್ಯ ಸಂಸ್ಥೆಗೆ ವಿವರ ಸಲ್ಲಿಸಿಲ್ಲದಿರುವುದು ನನ್ನ ಗಮನಕ್ಕೆ ಬಂದಿದೆ. ತಕ್ಷಣ ಸಂಬಂಧಪಟ್ಟ ಎಲ್ಲರು ಕಾರ್ಯಪ್ರವೃತ್ತರಾಗಲು ಕೋರುತ್ತೇನೆ.

ಸ್ಕೌಟ್-ಗೈಡ್ ಚಳವಳಿಯ ಚಿಂತನೆ-ಆದರ್ಶಗಳನ್ನು ಬೆಳೆಸಲು ನಾವೆಲ್ಲಾ ಹೆಚ್ಚಿನ ಶ್ರಮ ವಹಿಸೋಣವೆಂದು ಚಳವಳಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹೋದ್ಯೋಗಿಗಳಲ್ಲಿ ಕೋರುತ್ತೇನೆ.

2010-2011 ರಲ್ಲಿ ಕಬ್, ಬುಲ್ ಬುಲ್, ಸ್ಕೌಟ್-ಗೈಡ್, ರೋವರ್, ರೇಂಜರ್ ಚಟುವಟಿಕೆಗಳನ್ನು ನಮ್ಮಗಳ ಕಾರ್ಯಕ್ಷೇತ್ರಗಳಲ್ಲಿ ಹೆಚ್ಚಿಸಲು ಭಗವಂತನ ಕೃಪಾಶೀವಾದಗಳು ಸದಾ ನಮ್ಮೆಲ್ಲರ ಮೇಲೆ ಇರಲೆಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬಿ. ಷಣ್ಮುಖಪ್ಪ

ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

– ಮಹಾತ್ಮಾ ಗಾಂಧಿ

ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟು ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.

– ಜವಾಹರಲಾಲ್ ನೆಹರು

ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ ಮತ್ತು ಗೈಡ್ ಚಳವಳಿಗೆ ಕಳುಹಿಸುತ್ತಿದ್ದೆ.

– ಡಾ. ಅನಿ ಬೆಸೆಂಟ್

# ರಾಜ್ಯ ವಾರ್ತೆ



## ರಾಜ್ಯಮಟ್ಟದ 33ನೇ ಕಬ್ ಬುಲ್‌ಬುಲ್ ಉತ್ಸವ

ವಿದ್ಯಾರ್ಥಿಗಳ ಮನಸ್ಸನ್ನು ಅನವಶ್ಯಕ ವಿಚಾರಗಳ ಕಡೆಗೆ ಸೆಳೆಯುವ ವಿವಿಧ ಮಾಧ್ಯಮಗಳ ಅಬ್ಬರದ ನಡುವೆಯೂ ಸ್ಕೌಟ್ಸ್ ಗೈಡ್ಸ್ ಸಂಸ್ಥೆಯು ದೇಶಕಟ್ಟುವ ಕೆಲಸವನ್ನು ನಿಸ್ವಾರ್ಥ ದೃಷ್ಟಿಯಿಂದ ಮಾಡುತ್ತಿರುವುದು ಸ್ತುತ್ಯಾರ್ಹವಾಗಿದೆ. ಇಂತಹ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್ ಬುಲ್ಸ್, ಘಟಕಗಳು ಎಲ್ಲಾ ಶಾಲೆಗಳಲ್ಲಿ ಪ್ರಾರಂಭವಾಗಬೇಕೆಂದು ಕರ್ನಾಟಕ ರಾಜ್ಯದ ಮಾನ್ಯ ಗೃಹ ಸಚಿವ ಡಾ. ವಿ.ಎಸ್. ಆಚಾರ್ಯ ರವರು ತಿಳಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಮಟ್ಟದ 33ನೇ ಕಬ್ಸ್ , ಬುಲ್ ಬುಲ್ಸ್ ಉತ್ಸವವನ್ನು ರಾಜ್ಯ ಸಂಸ್ಥೆ ಹಾಗೂ ಜಿಲ್ಲಾ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ ದಿನಾಂಕ 27-12-2009 ರಿಂದ 31-12-2009ರ ವರೆಗೆ ಸೈಲಾಸ್ ಇಂಟರ್ ನ್ಯಾಷನಲ್ ಶಾಲೆ, ಉಡುಪಿಯಲ್ಲಿ ಜರುಗಿದ್ದು ಇದರ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಅವರು ಮಾತನಾಡಿದರು. ತರಬೇತಿ ಕೇಂದ್ರಕ್ಕೆ ಜಾಗ ಮಂಜೂರು ಮಾಡುವುದಾಗಿ ಜಿಲ್ಲಾ ಉಸ್ತುವಾರಿ ಸಚಿವರೂ ಆದ ಡಾ. ವಿ.ಎಸ್. ಆಚಾರ್ಯ ತಿಳಿಸಿದರು.

ಕಬ್ಸ್, ಬುಲ್ ಬುಲ್ಸ್ ವಿದ್ಯಾರ್ಥಿಗಳಿಗೆ ಉತ್ಸವದಲ್ಲಿ ಕಂಠವಸ್ತ್ರ ತೊಡಿಸುವ ಮೂಲಕ ಉತ್ಸವವನ್ನು ಉದ್ಘಾಟಿಸಿದ ರಾಜ್ಯ ಜವಳಿ ಯುವಜನ ಸೇವಾ ಮತ್ತು ಕ್ರೀಡಾ ಸಚಿವ ಜವಳಿ, ಶ್ರೀ ಗೂಳಿಹಟ್ಟಿ ಡಿ. ಶೇಖರ್ ಸ್ಕೌಟ್ಸ್ ಮತ್ತು ಗೈಡ್ಸ್ ನಿಂದ ವಿದ್ಯಾರ್ಥಿಗಳಲ್ಲಿ ಶಿಸ್ತು ಮೂಡುತ್ತದೆ. ಇದರಿಂದ ಉತ್ತಮ ಸಮಾಜ ನಿರ್ಮಾಣವಾಗುತ್ತದೆ ಎಂದರು.

ಉತ್ಸವದ ಮಾಹಿತಿ ಪುಸ್ತಕವನ್ನು ಉಡುಪಿ ಶಾಸಕ ಕೆ. ರಘುಪತಿ ಭಟ್, ರಾಜ್ಯ ಸಂಸ್ಥೆ ಪ್ರಕಟಿತ ಪುಸ್ತಕಗಳಾದ, ವಿಕಸನ ಬುಲ್ ಬುಲ್ಸ್ ದಿನಚರಿ ಪುಸ್ತಕ, ಸರ್ವಧರ್ಮ ಪ್ರಾರ್ಥನೆ, ಸ್ಕೌಟ್ ಪ್ರತಿಜ್ಞೆ ಮತ್ತು ನಿಯಮ, ಸ್ಕೌಟಿಂಗ್ ಪರಿಚಯ ಪುಸ್ತಕಗಳನ್ನು ತಾ. ಪಂ. ಶಾಸಕ ಶ್ರೀ ಬಾಲಾಜಿ ಆರ್.ಮೆಂಡನ್ ಮತ್ತು ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಸುಧಾಕರ ಶೆಟ್ಟಿ ಇವರು ಬಿಡುಗಡೆ ಮಾಡಿದರು. ರಾಜ್ಯಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಕರ್ನಾಟಕದಲ್ಲಿ ಸ್ಕೌಟಿಂಗ್ ಗೈಡಿಂಗ್ ಚಳುವಳಿಯ ಬೆಳವಣಿಗೆಯ ಮಾಹಿತಿ ನೀಡಿ ಎಲ್ಲರ ಸಹಕಾರ ಅಪೇಕ್ಷಿಸಿದರು. ರಾಜ್ಯ ಆಯುಕ್ತರು (ಗೈಡ್ಸ್) ಶ್ರೀಮತಿ ರವಿ ವೆಸ್ಲಿ, ಸಹಾಯಕ ರಾಜ್ಯ ಆಯುಕ್ತರು (ಸ್ಕೌಟ್ಸ್) ಶ್ರೀ ಐ.ಎ. ಕೈರನ್ನ, ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರುಗಳಾದ ಶ್ರೀ ಪಿ. ರವೀಂದ್ರ ನಾಯಕ್, ಶ್ರೀಮತಿ ಶಾಂತಾ ವಿ. ಆಚಾರ್ಯ, ಜ್ಯೋತಿ ಜಿ. ಪೈ, ಜಿಲ್ಲಾ ಮುಖ್ಯ ಆಯುಕ್ತರು ಕೆ.ಬಿ. ರಾವ್ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಎಡ್ವಿನ್ ಆಳ್ವ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಜಂಟಿ ಕಾರ್ಯದರ್ಶಿಗಳು ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀ ರಾಜಗೋಪಾಲ್ ಆಚಾರ್ಯ, ಸಿಸ್ಟರ್ ವಿವಿಯಾನ ಕ್ರಿಸ್ತಿನಾ ಡೇಸಾ, ಸೈಲಾಸ್ ಇಂಟರ್ ನ್ಯಾಷನಲ್ ಸ್ಕೂಲ್ ಅಧ್ಯಕ್ಷರಾದ ಆರ್. ಎಸ್. ಮಾಬೆನ್, ರಾಜ್ಯ ಸಂಸ್ಥೆಯ ಪ್ರಕಟಿತ ಪುಸ್ತಕಗಳ ಲೇಖಕರಾದ ಆರ್. ಚಂದ್ರಶೇಖರನ್, ಎಲ್.ಟಿ. (ಕಬ್ಸ್) ಇವರನ್ನು ಸನ್ಮಾನಿಸಲಾಯಿತು.

ದಿನಾಂಕ 28-12-2009ರಂದು ಸಾಹಸಮಯ ಚಟುವಟಿಕೆಗಳ ಉದ್ಘಾಟನೆಯನ್ನು ಸಂತೋಷ್ ಆರ್. ಮಾಬೆನ್ ಮಾಡಿದರು. ಶ್ರೀ ಡಿ. ಮಂಜುನಾಥಯ್ಯ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಧ್ಯಕ್ಷತೆ ವಹಿಸಿದ್ದರು.

ಅಂದು ಸಂಜೆ ಅಗ್ನಿ ಶಾಮಕದಳದ ಅಗ್ನಿ ದುರಂತವನ್ನು ತಡೆಗಟ್ಟುವ ವಿಧಾನವನ್ನು ಪ್ರಾತ್ಯಕ್ಷಿಕೆಯ ಮೂಲಕ ಮಾಡಿ ತೋರಿಸಿದರು.

ರಾತ್ರಿ ಕಬ್ಸ್, ಬುಲ್ ಬುಲ್ಸ್‌ಗಳ ಜಾನಪದ ನೃತ್ಯ ಕಾರ್ಯಕ್ರಮವನ್ನು ರೆ|| ಸ್ಟಿವನ್ ಸನ್ ಆಲೂಸ್ ಮತ್ತು ಶ್ರೀಮತಿ ಶೈಲಾಮಾಬೆನ್ ಉದ್ಘಾಟಿಸಿದರು.

29-12-2009 ರಂದು ಕಬ್ಸ್, ಬುಲ್ ಬುಲ್ಸ್‌ಗಳು ತಯಾರಿಸಿದ ಕರಕುಶಲ ವಸ್ತುಗಳು ಹಾಗೂ ಗೈಡರ್ಸ್ ಶಾರದಾ ಎಸ್. ರಾವ್ ರವರು ತಯಾರಿಸಿದ "ವಸ್ತುಗಳ ಪ್ರದರ್ಶನ" ವನ್ನು ಶ್ರೀ ಪುರುಷೋತ್ತಮ ಶೆಟ್ಟಿ, ಉಜ್ವಲ್ ಡೆವಲಪರ್ಸ್ ಉಡುಪಿ, ಉದ್ಘಾಟಿಸಿದರು. ಶ್ರೀ ಬಿ. ಶೇಖರ್ ಕ್ಷೇತ್ರ ಶಿಕ್ಷಣಾಧಿಕಾರಿಗಳು ಬೈಂದೂರು ಅಧ್ಯಕ್ಷತೆ ವಹಿಸಿದ್ದರು.

ಅಂದು ಸಂಜೆ ಶ್ರೀ ಕೃಷ್ಣ ಮಠದ ರಾಜಾಂಗಣದಲ್ಲಿ ಶ್ರೀಶ್ರೀಶ್ರೀ ಸುಗುಣೇಂದ್ರ ತೀರ್ಥ ಸ್ವಾಮೀಜಿ ಪರ್ಯಾಯ ಶ್ರೀ ಪುತ್ತಿಗೆ ಮಠ, ಉಡುಪಿ ಇವರಿಂದ ಆಶೀರ್ವಚನ, ನಂತರ ಭವ್ಯ ನಗರ ಮೆರವಣಿಗೆಯನ್ನು ಶ್ರೀಮತಿ ಶಾಂತ ವಿ. ಆಚಾರ್ಯ ಉದ್ಘಾಟಿಸಿದರು.

ರಾತ್ರಿ 8.00 ಗಂಟೆಗೆ ಕಬ್ಸ್, ಬುಲ್ ಬುಲ್ಸ್ ಶಿಕ್ಷಕ-ಶಿಕ್ಷಕಿಯರಿಂದ ಶಿಬಿರಾಗ್ನಿ ಕಾರ್ಯಕ್ರಮ ಜರುಗಿತು. ಕುಂದಾಪುರ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಗೋಪಾಲ ಶೆಟ್ಟಿ ಇವರು ಭವ್ಯ ಶಿಬಿರಾಗ್ನಿಯನ್ನು ಉದ್ಘಾಟಿಸಿದರು. ಬ್ರಹ್ಮಾವರ ವಲಯದ

# Cubs, bulbuls have gala time in Udupi

The Cubs and Bulbuls fest organised by Bharat Scouts and Guides, Karnataka unit in Udupi made it possible for a large number of little kids to absorb and acquaint value based education coupled with courageous deeds. The fest, restricted to primary school kids facilitated them with enormous adventure based entertainment activities. About a thousand kids and teachers from 25 districts across the State took part in the activities.

Speaking to *City Herald*, State Organising Commissioner Janaki Venugopal said that the fest is all about sharing, caring and involvement. It helps to bring out the hidden talents among kids and help them out to develop leadership qualities, she said.

Assistant State Organising Commissioner of Udupi District M Prabhakar Bhat informed that the prime motto behind the camp is to develop analytical skills and also passion for adventure amongst kids.

Each day of the five day festival were specifically designed for the purpose of adventure, folk dances, expo based on artifacts and paintings scribbled by the kids themselves and "Cub masters and Flak leaders' camp." 'Local talents show' was organised to introduce the talents exhibited by the local kids. The expo displayed varieties of handicrafts manufactured by children themselves. The exhibition also involved paintings by the participants. Besides, the exhibition displayed paper crafts, waste material products, terracotta products, decorative flower containers and so on.

The folk dance programme was an attempt aimed at introducing folk art culture of the coastal area to the children who came from other regions. The folk dramas enthralled the children besides educating them on the culture and tradition. 'Yakshagana' was an exciting experience for the kids. They tried to put steps to the 'bhagavatas' and 'tala maddale'.




**Cubs and Bulbuls taking part in various activities at the Cubs and Bulbuls fest organised by Bharat Scouts and Guides in Udupi.**
DH PHOTOS/UMESH POOJARY





The galaxy of exploratory activities enabled the kids to get in touch with adventurous deeds. Most of the actions were beyond their capacity and of course their age. 'Rope bridges,' 'suspension bridges,' 'hanging bridges,' 'tarzan jump,' 'swing roll' and 'tower channels' were all part of the activities. But the kids completed them without complaint, which even grown ups would have found difficult.

Shreyanka Heeremath from Haveri Government Primary School said that the camp taught them community living. "We got many friends who came from different places. It is a disciplined way of life," she said.

The fest was conceptualised with the strong groundwork of religious harmony. Kids were made to read Bhagavat Gita, Holy Koran and Holy Bible as part of their all religious prayers. "It teaches us how to tolerate other religions. We all are Indians and we all are one," said Sanjeeth from Bangalore.

They enjoyed site seeing visiting Sri Krishna math, Malpe beach and other surrounding places. Obviously the kids relished the five-day stay in Udupi. It was an educative encounter to the kids with various facets of life. Truly a strong edifice to the disciplined life building the future of the Gen Next.

**Manjusree G Naik**

# ರಾಜ್ಯದ ಪ್ರತಿ ಶಾಲೆಗೆ ಸ್ಕೌಟ್ಸ್ ಗೈಡ್ಸ್ ಶಿಕ್ಷಕರ ನೇಮಕ: ಡಾ.ಆಚಾರ್ಯ

ಉಡುಪಿ, ಡಿ.27: ರಾಜ್ಯದ ಪ್ರತಿ ಶಾಲೆಗಳಲ್ಲಿ ತಲಾ ಇಬ್ಬರು ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕ ಶಿಕ್ಷಕಿಯರನ್ನು ಕಡ್ಡಾಯವಾಗಿ ನೇಮಕ ಮಾಡಿಕೊಳ್ಳಬೇಕೆಂಬ ಆದೇಶ ವನ್ನು ರಾಜ್ಯ ಸರ್ಕಾರ ಶೀಘ್ರದಲ್ಲೇ ಹೊರಡಿಸಲಿದೆ ಎಂದು ರಾಜ್ಯ ಗೃಹ ಸಚಿವ ಡಾ.ವಿ.ಎಸ್.ಆಚಾರ್ಯ ತಿಳಿಸಿದ್ದಾರೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಉಡುಪಿಯ ಹನುಮಂತ ನಗರದ ಸೈಲಾಸ್ ಇಂಟರ್‌ನ್ಯಾಷನಲ್ ಸ್ಕೂಲ್‌ನಲ್ಲಿ ಹಮ್ಮಿಕೊಳ್ಳಲಾಗಿರುವ ಐದು ದಿನಗಳ ರಾಜ್ಯಮಟ್ಟದ 33ನೆ ಕಬ್- ಬುಲ್‌ಬುಲ್ ಉತ್ಸವದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ಅವರು ರವಿವಾರ ಮಾತನಾಡುತ್ತಿದ್ದರು.

ಮುಂದಿನ ಒಂದು ವರ್ಷ ದೊಳಗೆ ಅಲೆವೂರು ಸಮೀಪ ನಿರ್ಮಾಣಗೊಳ್ಳುತ್ತಿರುವ ಕಾರಂತ ಕಲಾ ಗ್ರಾಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ ವಿದ್ಯಾರ್ಥಿಗಳ ತರಬೇತಿ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ ಎಂದವರು ಹೇಳಿದರು.

ಬಡ ಕಬ್ ಮತ್ತು ಬುಲ್‌ಬುಲ್ ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ ನೀಡುವ ಯೋಜನೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗೂ ವಿಸ್ತರಿಸಲು ಸರಕಾರ ಚಿಂತನೆ ನಡೆಸುತ್ತಿದೆ ಎಂದು ಅವರು ತಿಳಿಸಿದರು.

ಉತ್ಸವವನ್ನು ಉದ್ಘಾಟಿಸಿದ ರಾಜ್ಯ ಜವಳಿ, ಯುವಜನ ಸೇವಾ ಮತ್ತು ಕ್ರೀಡಾ ಸಚಿವ ಗೂಳಿಹಟ್ಟಿ ಡಿ.ಶೇಖರ್ ಮಾತನಾಡಿ, ಸಮಾಜದಲ್ಲಿ ಶಿಸ್ತು ಕಾಪಾಡಲು ಹಾಗೂ ವಿದ್ಯಾರ್ಥಿಗಳನ್ನು ಉತ್ತಮ ನಾಗರಿಕರನ್ನಾಗಿಸಲು ಸ್ಕೌಟ್ಸ್ ಮತ್ತು ಗೈಡ್ಸ್ ಒಳ್ಳೆಯ ಅವಕಾಶವಾಗಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಬೇಕಾದ ಎಲ್ಲ ರೀತಿಯ ನೆರವನ್ನು ಒದಗಿಸಲು ಸರಕಾರ ಬದ್ಧವಾಗಿದೆ ಎಂದು ಹೇಳಿದರು.

ಉಡುಪಿ ಶಾಸಕ ಕೆ.ರಘುಪತಿ ಭಟ್ ಉತ್ಸವ ಮಾಹಿತಿ ಪುಸ್ತಕವನ್ನು ಬಿಡುಗಡೆಗೊಳಿಸಿದರು. ಮುಖ್ಯ ಅತಿಥಿಗಳಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಕೊಂಡಜ್ಜಿ ಬಿ. ಷಣ್ಮುಖಪ್ಪ, ಸೈಲಾಸ್ ಸ್ಕೂಲ್‌ನ ಅಧ್ಯಕ್ಷ ಆರ್.ಎಸ್.ಮಾಬೆನ್, ಕಾಪು ಶಾಸಕ ಲಾಲಾಜಿ ಆರ್ ಮೆಂಡನ್, ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಸುಧಾಕರ ಶೆಟ್ಟಿ ಭಾಗವಹಿಸಿದ್ದರು.

ರಬೀಂದ್ರ ನಾಯಕ್, ಶಾಂತ ವಿ. ಆಚಾರ್ಯ, ಜ್ಯೋತಿ ಜೆ.ಪೈ, ಗೈಡ್ಸ್‌ನ ರಾಜ್ಯ ಆಯುಕ್ತೆ ರವಿ ವೆಸ್ಲಿ, ಸಹಾಯಕ ರಾಜ್ಯ ಆಯುಕ್ತ ಐ.ಎ.ಕೈರನ್ನ, ಜಿಲ್ಲಾ ಮುಖ್ಯ ಆಯುಕ್ತ ಕೆ.ಬಿ.ರಾವ್, ಜಿಲ್ಲಾ ಆಯುಕ್ತೆ ರಾಜಲಕ್ಷ್ಮೀ ಶೆಟ್ಟಿ, ದೇವಾನಂದ್ ಉಪಸ್ಥಿತರಿದ್ದರು.

ರಾಜ್ಯ ಜಂಟಿ ಕಾರ್ಯದರ್ಶಿ ಎನ್.ಶ್ರೀನಿವಾಸನ್ ಪ್ರಾಸ್ತಾವಿಕವಾಗಿ ಮಾತನಾಡಿದರು. ಸದಾಶಿವ ಭಟ್ ಸ್ವಾಗತಿಸಿದರು. ರಾಜಗೋಪಾಲ್ ವರದಿ ವಾಚಿಸಿದರು. ಕಲ್ಮಾಡಿ ಶೇಖರ್ ಪೂಜಾರಿ ವಂದಿಸಿದರು. ಆನಂದ ಅಡಿಗ ಕಾರ್ಯಕ್ರಮ ನಿರೂಪಿಸಿದರು.

ಹೊಸ ದಿಗಂತ



THE NEW INDIAN EXPRESS | MONDAY, DECEMBER 28 | 2009 | BANGALORE 3

## CUB-BULL-BULL UTSAV INAUGURATED

Express News Service
Udupi

MINISTER for Sports and Youth Affairs Goolihatti Shekhar on Sunday inaugurated the five-day- state level Cub-Bull Bull Utsav, organised by the Karnataka unit of Bharath Scouts and Guides, at Silas International School.

In his inaugural address, Shekhar pointed out the role played by scouts and guides in shaping a disciplined society. He assured that his ministry will help to promote scouts and guides.

Home Minister Dr V S Acharya presided over the programme. Udupi MLA K Raghupathi Bhat released a booklet on the Cub-Bull-Bull Utsav. Kaup MLA Lalaji R Mendon, Chief Commissioner of Bharath Scouts and Guides, Karnataka, Kondajji Shanmukhappa, Udupi CMC President Herga Dinkar Shetty and others were present.



ಕಬ್ ಬುಲ್ ಬುಲ್ ಉತ್ಸವ

ಪ್ರಜಾವಾಣಿ

## ಶಿಸ್ತಿಗಾಗಿ ಸ್ಕೌಟ್ಸ್‌ಗೆ ಸೇರಿಸಿ: ಗೂಳಿಹಟ್ಟಿ

ಪ್ರಜಾವಾಣಿ ವಾರ್ತೆ

ಉಡುಪಿ: ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಭವಿಷ್ಯದಲ್ಲಿ ಶಿಸ್ತು ಮತ್ತು ಉತ್ತಮ ನಾಗರಿಕರನ್ನಾಗಿ ರೂಪಿಸಲು ಸಹಕಾರಿ ಎಂದು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಸಚಿವ ಗೂಳಿಹಟ್ಟಿ ಶೇಖರ್ ಇಲ್ಲಿ ಹೇಳಿದರು.

ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ವತಿಯಿಂದ ಹನುಮಂತನಗರದ ಸೈಲಾಸ್ ಇಂಟರ್ ನ್ಯಾಷನಲ್ ಸ್ಕೂಲ್‌ನಲ್ಲಿ ಭಾನುವಾರ ಆಯೋಜಿಸಿದ್ದ ರಾಜ್ಯಮಟ್ಟದ ಕಬ್ ಬುಲ್ ಬುಲ್ ಉತ್ಸವಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ಮಕ್ಕಳಲ್ಲಿ ಪ್ರಾರಂಭದಿಂದಲೇ ಶಿಸ್ತು ಬೆಳೆಸಿ ಸನ್ನಡತೆಯವರನ್ನಾಗಿ ಮಾಡಲು ಸ್ಕೌಟ್ಸ್‌ಗೆ ಸೇರಿಸಬೇಕು. ತಾವು ಕೂಡ ಬಾಲ್ಯದಲ್ಲಿ ಸ್ಕೌಟ್ಸ್‌ನಲ್ಲಿದ್ದೆ ಎಂದು ಸ್ಮರಿಸಿಕೊಂಡ ಸಚಿವರು ವಿದ್ಯಾರ್ಥಿಗಳ ಸರ್ವತೋಮುಖ ಪ್ರಗತಿಗೆ ಸ್ಕೌಟ್ಸ್ ಪೂರಕ ಎಂದರು.

ಅಧ್ಯಕ್ಷತೆ ವಹಿಸಿದ್ದ ಸಚಿವ ಡಾ.ವಿ.ಎಸ್. ಆಚಾರ್ಯ, ಸ್ಕೌಟ್ಸ್ ಉತ್ಸವಕ್ಕಾಗಿ ವಿವಿಧ ಕಡೆಗಳಿಂದ ಈ ಉತ್ಸವದಲ್ಲಿ ಪಾಲ್ಗೊಂಡ ಮಕ್ಕಳಿಗೆ ಶುಭ ಕೋರಿದರು. ಶಾಸಕರಾದ ರಘುಪತಿ ಭಟ್, ಲಾಲಾಜಿ ಆರ್.ಮೆಂಡನ್, ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಸುಧಾಕರ ಶೆಟ್ಟಿ, ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಮುಖ್ಯಸ್ಥ ಕೊಂಡಜ್ಜಿ ಷಣ್ಮುಖಪ್ಪ, ಆಯುಕ್ತ ರವಿ ವೆಸ್ಲಿ, ಜಂಟಿ ಕಾರ್ಯದರ್ಶಿ ಎನ್.ಶ್ರೀನಿವಾಸನ್, ಜಿಲ್ಲಾ ಉಪಾಧ್ಯಕ್ಷ ರಬೀಂದ್ರ ನಾಯಕ್, ಶಾಂತಾ ವಿ.ಆಚಾರ್ಯ, ಕೆ.ಬಿ.ರಾವ್, ಜ್ಯೋತಿ ಜೆ.ಪೈ, ರಾಜಲಕ್ಷ್ಮಿ ಡಿ.ಶೆಟ್ಟಿ, ಸೈಲಾಸ್ ಇಂಟರ್ ನ್ಯಾಷನಲ್ ಸ್ಕೂಲ್‌ನ ಅಧ್ಯಕ್ಷ ಆರ್.ಎಸ್.ಮಾದೇಶ್ ಹಾಜರಿದ್ದರು.

ಮಂಗಳೂರು, ಶುಕ್ರವಾರ ಡಿಸೆಂಬರ್ 25, 2009 : 3 ವಾರ್ತಾಭಾರತಿ

## ಉಡುಪಿ: ರಾಜ್ಯ ಮಟ್ಟದ ಕಬ್-ಬುಲ್‌ಬುಲ್ ಉತ್ಸವ

ಉಡುಪಿ, ಡಿ.24: ಭಾರತ್ ಸ್ಕೌಟ್ ಮತ್ತು ಗೈಡ್ಸ್‌ನ ಉಡುಪಿ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ರಾಜ್ಯ ಮಟ್ಟದ 33ನೆ 'ಕಬ್-ಬುಲ್‌ಬುಲ್ ಉತ್ಸವ' ಡಿ.27ರಿಂದ 31ರವರೆಗೆ ನಿಟ್ಟೂರು ಹನುಮಂತನಗರದಲ್ಲಿರುವ ಸೈಲಾಸ್ ಇಂಟರ್‌ನ್ಯಾಷನಲ್ ಸ್ಕೂಲ್‌ನಲ್ಲಿ ನಡೆಯಲಿದೆ ಎಂದು ಸ್ಕೌಟ್ಸ್‌ನ ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಎಂ.ಪ್ರಭಾಕರ್ ಭಟ್ ತಿಳಿಸಿದ್ದಾರೆ.

ಇಂದಿಲ್ಲಿ ಕರೆದ ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಅವರು, ಇದರಲ್ಲಿ 5ರಿಂದ 10 ವರ್ಷದೊಳಗಿನ ವಯೋಮಾನದ 1,200ಕ್ಕೂ ಅಧಿಕ ಕಬ್ ಮತ್ತು ಬುಲ್‌ಬುಲ್ ಮಕ್ಕಳು ಹಾಗೂ ಶಿಕ್ಷಕರು ಭಾಗವಹಿಸಲಿದ್ದಾರೆ ಎಂದರು.

ಉತ್ಸವವನ್ನು ರಾಜ್ಯ ಜವಳಿ, ಯುವಜನ ಸೇವಾ ಮತ್ತು ಕ್ರೀಡಾ ಸಚಿವ ಗೂಳಿಹಟ್ಟಿ ಡಿ.ಶೇಖರ್ 27ರಂದು ಸಂಜೆ 4:30ಕ್ಕೆ ಉದ್ಘಾಟಿಸಲಿದ್ದಾರೆ. ರಾಜ್ಯ ಗೃಹ ಸಚಿವ ಡಾ.ವಿ.ಎಸ್.ಆಚಾರ್ಯ ಅಧ್ಯಕ್ಷತೆ ವಹಿಸಲಿದ್ದಾರೆ. ಶಾಸಕ ಕೆ.ರಘುಪತಿ ಭಟ್, ಉದ್ಯಮಿ ಡಾ.ಜಿ.ಶಂಕರ್, ಭಾರತ್ ಸ್ಕೌಟ್ ಮತ್ತು ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತ ಕೊಂಡಜ್ಜಿ ಬಿ.ಷಣ್ಮುಖಪ್ಪ, ಸೈಲಾಸ್ ಸ್ಕೂಲ್‌ನ ಅಧ್ಯಕ್ಷ ಆರ್ ಎಸ್.ಮಾಬೆನ್ ಭಾಗವಹಿಸಲಿದ್ದಾರೆ ಎಂದರು. 28ರಂದು ಕಬ್ ಮತ್ತು ಬುಲ್‌ಬುಲ್‌ಗಳ ಸಾಹಸಮಯ ಚಟುವಟಿಕೆಗಳ ಉದ್ಘಾಟನೆ. ಮರುದಿನ ಮಧ್ಯಾಹ್ನ 12 ಗಂಟೆಗೆ ವಸ್ತು ಪ್ರದರ್ಶನ ಉದ್ಘಾಟಗೊಳ್ಳಲಿದೆ.

30ರ ಸಂಜೆ 4 ಗಂಟೆಗೆ ಜಿ.ಪಂ. ಅಧ್ಯಕ್ಷೆ ಗ್ಲಾಡಿಸ್ ಅಲ್ಮೇಡರ ಅಧ್ಯಕ್ಷತೆಯಲ್ಲಿ ಸಮಾರೋಪಗೊಳ್ಳಲಿದೆ.

ಪತ್ರಿಕಾಗೋಷ್ಠಿಯಲ್ಲಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷ ಪಿ.ರಬೀಂದ್ರ ನಾಯಕ್, ಜಿಲ್ಲಾ ಮುಖ್ಯ ಆಯುಕ್ತ ಕೆ.ಬಿ.ರಾವ್, ಜಿಲ್ಲಾ ಆಯುಕ್ತ ಎಡ್ವಿನ್ ಆಳ್ವ, ರಾಜ್ಯ ಸಂಘಟನಾ ಆಯುಕ್ತ ನಾರಾಯಣ ಶೆಟ್ಟಿ, ಜಿಲ್ಲಾ ತರಬೇತಿ ಆಯುಕ್ತ ಕೊಗ್ಗ ಗಾಣಿಗ, ರಾಜಗೋಪಾಲ್, ಶೇಖರ ಪೂಜಾರಿ ಉಪಸ್ಥಿತರಿದ್ದರು.

ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ವಸಂತ ಶೆಟ್ಟಿ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

30-12-2009 ರಂದು ಸಂಜೆ ಸಮಾರೋಪ ಸಮಾರಂಭವು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಪಿ. ರವೀಂದ್ರ ನಾಯಕ್ ರವರ ಅಧ್ಯಕ್ಷತೆಯಲ್ಲಿ ಜರುಗಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಸಮಾರೋಪ ಭಾಷಣದಲ್ಲಿ ಬಡವಿದ್ಯಾರ್ಥಿಗಳಿಗೆ ಸ್ಕೌಟಿಂಗ್, ಗೈಡಿಂಗ್ ಸೇರಲು ಸಮವಸ್ತ್ರವನ್ನು ನೀಡುವಂತೆ ಜಿಲ್ಲಾ ಪಂಚಾಯತ್ ಹಾಗೂ ನಗರ ಸಭೆಯನ್ನು ವಿನಂತಿಸಿದರು. ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ಪ್ರಾಣೇಶ್‌ರಾವ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಸ್ಕೌಟ್ಸ್, ಗೈಡ್ಸ್ ತತ್ವಗಳನ್ನು ತಿಳಿಸುವ ಶಿಬಿರಗಳನ್ನು ಗ್ರಾಮ ಪಂಚಾಯತಿ ಮಟ್ಟದ ಜನಪ್ರತಿನಿಧಿಗಳಿಗೂ ಏರ್ಪಡಿಸಬೇಕೆಂದು ತಿಳಿಸಿದರು. ಡಾ. ಜಿ. ಶಂಕರ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ನಗರ ಸಭೆಯ ಆಯುಕ್ತರು ಶ್ರೀ ಗೋಕುಲ್ ನಾಯಕ್, ಶ್ರೀ ವಿನಯ ಕುಮಾರ್ ಸೊರಕೆ, ಶ್ರೀ ಪ್ರಮೋದ್ ಮಧ್ವರಾಜ್, ಕ್ಷೇತ್ರ ಶಿಕ್ಷಣಾಧಿಕಾರಿ ಡಿ. ಮಂಜುನಾಥಯ್ಯ, ಅತಿಥಿಗಳಾಗಿ ಭಾಗವಹಿಸಿ ಪ್ರಮಾಣ ಪತ್ರಗಳನ್ನು ವಿತರಿಸಿದರು. ಸಿಸ್ಟರ್ ಬಿಬಿಯಾನ, ಡಾ. ಜಿ. ಶಂಕರ್, ಅಧ್ಯಕ್ಷರು ಜಿ. ಶಂಕರ್ ಫ್ಯಾಮಿಲಿ ಟ್ರಸ್ಟ್, ಶ್ರೀ ರವೀಂದ್ರ ನಾಯಕ್ ಇವರುಗಳನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ರಾತ್ರ ಕಬ್ಸ್, ಬುಲ್ ಬುಲ್ಸ್‌ಗಳ ಕಲರವ, ಶಿಬಿರಾಗ್ನಿ ಕಾರ್ಯಕ್ರಮವನ್ನು ಕಾರ್ಕಳ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಸಿ. ರಂಗಧಾಮಪ್ಪ ಉದ್ಘಾಟಿಸಿದರು. ಶ್ರೀ ರತ್ನ ಕುಮಾರ್, ಪ್ರಾಂಶುಪಾಲರು ಡಯಟ್ ಉಡುಪಿ ಇವರು ಅಧ್ಯಕ್ಷತೆ ವಹಿಸಿದ್ದರು.

ಡಾ. ಬಿ.ವಿ. ಮಹೀದಾಸ್ ಡಿ.ಡಿ.ಪಿ.ಐ. ಉಡುಪಿ ಶ್ರೀ ಸೀಬಿ ರಂಗಯ್ಯ ಸಹಾಯಕ ನಿರ್ದೇಶಕರು, ಯುಜವನ ಸೇವಾ ಮತ್ತು ಕ್ರೀಡಾ ಇಲಾಖೆ, ಉಡುಪಿ, ಶ್ರೀ ರಾಮಚಂದ್ರ ಪೈ ಜಿಲ್ಲಾ ಆರೋಗ್ಯಾಧಿಕಾರಿಗಳು, ಉಡುಪಿ, ಶಿಬಿರಕ್ಕೆ ಭೇಟಿ ನೀಡಿ ಪ್ರೋತ್ಸಾಹಿಸಿದರು. ಶ್ರೀ ಬಿ.ಕೆ. ಪಾಟೀಲ್, ಧಾರವಾಡ, ಶ್ರೀ ಎಂ.ಜಿ. ಕಜೆ, ಮಂಗಳೂರು ಇವರ ನೇತೃತ್ವದಲ್ಲಿ ಸಾಹಸಮಯ ಚಟುವಟಿಕೆಗಳು ಉತ್ತಮವಾಗಿ ಜರುಗಿತು. ಮಣಿಪಾಲ್ ಮಲ್ಪೆ ಸಮುದ್ರ ತೀರ, ಶ್ರೀಕೃಷ್ಣ ಮಠ ಮುಂತಾದ ಸ್ಥಳಗಳಿಗೆ ಹೋಗಿ ಬರಲು ಮಣಿಪಾಲ್ ವಿಶ್ವ ವಿದ್ಯಾಲಯ, ಸೈಲಾಸ್ ಇಂಟರ್ ನ್ಯಾಷನಲ್ ಸ್ಕೂಲ್ ವತಿಯಿಂದ ವಾಹನ ವ್ಯವಸ್ಥೆ ಮಾಡಲಾಗಿತ್ತು. ಪ್ರಾದೇಶಿಕ ಸಾರಿಗೆ ಅಧಿಕಾರಿ ಶ್ರೀ ರಮೇಶ್ ಸಹಕಾರ ನೀಡಿದರು.

ಸರ್ವಧರ್ಮ ಪ್ರಾರ್ಥನೆ, ಕಾಡು ಕುಣಿತ, ಮೌಗ್ಲಿ ಕತೆ, ತಾರಾಕತೆ ಆಧರಿಸಿ ರೂಪಕ, ಮಕ್ಕಳ ರಂಗಭೂಮಿ ಚಟುವಟಿಕೆ, ಗಾಳಿ ಪಟ ರಚನೆ, ಶಿಬಿರಾಗ್ನಿ ಕಾರ್ಯಕ್ರಮ, ಜಾನಪದ ನೃತ್ಯ ಕಾರ್ಯಕ್ರಮ ಇವುಗಳಲ್ಲಿ ರಾಜ್ಯದ 25 ಜಿಲ್ಲೆಗಳಿಂದ 800 ಕಬ್ಸ್, ಬುಲ್ ಬುಲ್ಸ್‌ಗಳು ಲವಲವಿಕೆಯಿಂದ ಭಾಗವಹಿಸಿದರು. ಉಡುಪಿ ಜಿಲ್ಲಾಧಿಕಾರಿಗಳಾದ ಶ್ರೀಮತಿ ಹೇಮಲತಾರವರ ನೇತೃತ್ವದಲ್ಲಿ ವಿವಿಧ ಇಲಾಖೆಗಳ ಮುಖ್ಯಸ್ಥರ ಸಹಕಾರದೊಂದಿಗೆ ಉತ್ಸವ ಯಶಸ್ವಿಯಾಗಿ ಜರುಗಿತು. ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್) ಶ್ರೀ ನಾರಾಯಣ ಶೆಟ್ಟಿ, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್) ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ತರಬೇತಿ ಆಯುಕ್ತರುಗಳಾದ ಶ್ರೀ ಮಾದವ ಸಿಂಗ್, ಶ್ರೀಮತಿ ಕೆ.ಕೆ. ಲೀಲಾ ಇವರುಗಳ ಮಾರ್ಗದರ್ಶನದಲ್ಲಿ ರಾಜ್ಯದ ವಿವಿದ ಜಿಲ್ಲೆಗಳಿಂದ ಭಾಗವಹಿಸಿದ ಶಿಕ್ಷಕ-ಶಿಕ್ಷಕಿಯರ ಸಹಕಾರ, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಸ್ಕೌಟರ್ಸ್-ಗೈಡರ್ಸ್ ಹಾಗೂ ಜಿಲ್ಲೆಯ ವಿವಿಧ ದೇವಾಲಯಗಳು, ದಾನಿಗಳು. ಸೈಲಾಸ್ ಇಂಟರ್ ನ್ಯಾಷನಲ್ ಸ್ಕೂಲ್‌ನ ಆಡಳಿತ ಮಂಡಳಿ ಅಧ್ಯಾಪಕ ವೃಂದದವರ ಸಹಕಾರದಲ್ಲಿ ಉತ್ಸವವು ಯಶಸ್ವಿಯಾಗಿ ಜರುಗಿತು.

## ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜಯಂತಿ

ದಿನಾಂಕ: 12-1-2010 ರಂದು ರಾಷ್ಟ್ರೀಯ ಯುವ ದಿನಾಚರಣೆ ಮತ್ತು ಸ್ವಾಮಿ ವಿವೇಕಾನಂದ ಜಯಂತ್ಯೋತ್ಸವವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಇದರ ಕೇಂದ್ರ ಕಚೇರಿ ಆವರಣದಲ್ಲಿ ಆದರಿಸಲಾಯಿತು.



ಸನ್ಮಾನ್ಯ ಶ್ರೀ ಐ.ಎಸ್. ವಿಠಲಮೂರ್ತಿ, ಕಾರ್ಯದರ್ಶಿಗಳು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಕರ್ನಾಟಕ ಸರ್ಕಾರ ಇವರು ಶಾಂತಿ ನಡಿಗೆಯನ್ನು ಉದ್ಘಾಟಿಸಿ, ಮಾತನಾಡುತ್ತಾ ಶಿಸ್ತು, ಸಂಯಮ ಮತ್ತು ತ್ಯಾಗದ ಬಗ್ಗೆ ತಿಳುವಳಿಕೆ ನೀಡಿದರು. ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು ಅತಿಥಿಗಳನ್ನು ಸನ್ಮಾನಿಸಿದರು. ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿಗಳು ಸ್ಕೌಟ್-ಗೈಡ್‌ಗಳಿಗೆ ಹಿತವಚನ ನೀಡಿದರು.

ಬೆಂಗಳೂರು ನಗರ ಜಿಲ್ಲೆಯ 18 ಶಾಲೆಗಳಿಂದ ಸುಮಾರು 500 ಗೈಡ್ಸ್ ಮತ್ತು ಸ್ಕೌಟ್ಸ್ ಭಾಗವಹಿಸಿದ್ದರು. ಪಥಚಲನದ ನಂತರ ಸ್ವಾಮಿ ವಿವೇಕಾನಂದರ ಬಗ್ಗೆ ಚಿತ್ರರಚನಾ

ಆಶುಭಾಷಣಸ್ಪರ್ಧೆ, ಪ್ರಬಂಧ ಸ್ಪರ್ಧೆ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಅಡಿಯಲ್ಲಿ ಸ್ಕೌಟ್ ದಳದ ಪಾತ್ರ ಎಂಬುದರ ಬಗ್ಗೆ ಆಶುಭಾಷಣಸ್ಪರ್ಧೆ, ಪ್ರಬಂಧ ಸ್ಪರ್ಧೆ ಮತ್ತು ಸ್ವಾಮಿ ವಿವೇಕಾನಂದರ ಬಗ್ಗೆ ಚಿತ್ರ ರಚನಾ ಸ್ಪರ್ಧೆ ಏರ್ಪಡಿಸಲಾಗಿತ್ತು. ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರಾದ ಶ್ರೀ ಶಿವನಂಜಯ್ಯನವರು, ಬಹುಮಾನ ವಿತರಿಸಿ ಮಾತನಾಡುತ್ತಾ. ವಿವೇಕಾನಂದರ ಬಾಲ್ಯ ಜೀವನ, ಅವರ ತ್ಯಾಗದ ಬಗ್ಗೆ ವಿವರಿಸಿದರು. ಸ್ಕೌಟ್-ಗೈಡ್‌ಗಳ ಉತ್ತಮ ಸೇವೆಯನ್ನು ಪ್ರಶಂಸಿಸಿದರು. ಜಂಟಿ ನಿರ್ದೇಶಕರಾದ ಶ್ರೀ ಆರ್.ಎಲ್. ಪಾಟೀಲ್ ಮಾತನಾಡುತ್ತ ಸ್ಕೌಟ್-ಗೈಡ್‌ಗಳು ಶಿಸ್ತು ಸಂಯಮ ಬೆಳೆಸಿಕೊಳ್ಳಬೇಕೆಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಮಾತನಾಡುತ್ತ ಕರ್ನಾಟಕ ಸ್ಕೌಟ್-ಗೈಡ್ ದಳಗಳು ನಡೆದುಬಂದ ದಾರಿ, ಸ್ವಾಮಿ ವಿವೇಕಾನಂದರ ಆದರ್ಶವನ್ನು ತಿಳಿಸಿದರು.

ಮಾಜಿ ರಾಜ್ಯ ಕಾರ್ಯದರ್ಶಿಗಳಾರ ಶ್ರೀ ಚಿನ್ನಸ್ವಾಮಿರೆಡ್ಡಿಯವರು ವಂದನಾರ್ಪಣೆ ಗೈದರು

ರಾಜ್ಯ ಸಂಸ್ಥೆಯ ಉಪಾಧ್ಯಕ್ಷಿಣಿಯಾದ ಶ್ರೀಮತಿ ಎಂ.ಜಿ. ಬೋಪಯ್ಯ ಸಹಾಯಕ ರಾಜ್ಯ ಆಯುಕ್ತೆ ಶ್ರೀಮತಿ ಬಿ.ವಿ. ರಾಮರತ್ನ, ಜಂಟಿ ರಾಜ್ಯ ಕಾರ್ಯದರ್ಶಿ (ಗೈ) ಶ್ರೀಮತಿ ಬಿ.ವಿ. ರಾಮಲತಾ. ಮಾಜಿ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀಮತಿ ಮನೋಹರ, ಬೆಂಗಳೂರು ದಕ್ಷಿಣ ಮತ್ತು ಉತ್ತರ ಜಿಲ್ಲೆಗಳ ಪದಾಧಿಕಾರಿಗಳು ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಉಪಸ್ಥಿತರಿದ್ದರು.

# BASIC COURSE FOR COMMISSIONERS



The State Level Basic Course for Commissioners was held from 8th to 12th January 2010 at State Training Centre, Dr. Annie Besant Park, Doddaballapur, Bangalore Rural Dist. 37 candidates drawn from Gadag, Dakshina Kannada, Uttara kannada, Chamarajnagar, Belgaum Tumkur and Kolar, attended the Training Course. Topics such as: History of the Movement, Fundamentals, Different Sections of the Movement, Boys/Girl Programme, Adult Leaders training, Mission-Vission 2013, Leadership, Role of Commissioners, Public Relation & Comnmunication, Scouting/Guiding and the Community, Troop / Company Meetings, Organizations, Awards & Ceremony were dealt with.

Joint Camp fire was held with the B.Ed. Students of Rajeev Gandhi Sanskrit Institute of Education, Sringeri. Documentary Film "Promising Lights" produced by the Bharat Scouts and Guides, Karnataka was shown to the candidates. Observance of National Youth Day. The Birth Day of Swami Vivekananda was held on 12th January 2010.

Smt. K.K. Leela, State Training Commissioner (Guides) was the Leader. Under the guidance of Sri T.S. Lucas, State Commissioner (Scouts) Sri N. Srinivasan, Joint State Secretary (Scout) Sri Chinnaswamy Reddy, Smt. Geetha Nataraj, Headquarters Commissioners (Projects) Smt. Janaki Venugopal, State Organising Commissioner (Guide) Sri Madhav sing State Training Commissioner (Scouts) and Smt. B. Revathi, Leader Trainer (B.) were the Resource Persons. Sri M. Omeswaraiah, Warden assisted the Camp. Sri M.A. Chellaiah Headquaters Commissioner (Publication) Co-ordinated the Training Course.

# ಜಿಲ್ಲಾ ವಾರ್ತೆ

## ಬಿಜಾಪುರ



ದಿನಾಂಕ 25-11-2009 ರಿಂದ 29-12-2009ರ ವರೆಗೆ ರೋಣಿಹಾಳ ಗ್ರಾಮದ ಮುತ್ತಲದಿನ್ನಿ ಹನುಮಂತ ದೇವಾಲಯ ತಾ॥ ಬಸವನಬಾಗೇವಾಡಿ ಜಿಲ್ಲಾ ವಿಜಾಪುರ ಇಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್-ಗೈಡ್ ಪದಕ ತರಬೇತಿ ಹಗೂ ಸಮುದಾಯ ಸೇವಾ ಶಿಬಿರ ನಡೆಯಿತು. ದಿನಾಂಕ 25-12-2009 ರಂದು ನಡೆದ ಶಿಬಿರ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಮಾನ್ಯ ಶ್ರೀ ಮಯನಪ್ಪ ಕೆಳಗಿನ ಮನಿ, ಮ್ಯಾನೇಜರ್, ಬಸವೇಶ್ವರ ಕೋ. ಆಪ್ ಬ್ಯಾಂಕ್ ಕೊಲ್ಹಾರ ಇವರು ವಹಿಸಿದ್ದರು. ಶ್ರೀ ಅರವಿಂದ ಪೂಜಾರಿ ಉದ್ಘಾಟನೆ ಮಾಡಿದರು. ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಜಿಲ್ಲಾ ಕಾರ್ಯದರ್ಶಿಗಳು ಭಾರತ್ ಸ್ಕೌಟ್ ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಾಪುರ ಇವರು ಉಪಸ್ಥಿತರಿದ್ದರು.

ದಿನಾಂಕ : 28-12-2009 ರಂದು ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಶ್ರೀಯುತ: ಸಿದ್ಧಣ್ಣ ಬಾಲಗೊಂಡ, ಅಧ್ಯಕ್ಷರು ಹಾಗೂ ಪ್ರಗತಿಪರ ರೈತ, ಕೊಲ್ಹಾರ ಇವರು ಸ್ಕೌಟ್, ಗೈಡ್, ದಳಕ್ಕೆ ಸೆರಿದ ಪ್ರತಿಯೊಬ್ಬ ವಿದ್ಯಾರ್ಥಿ - ವಿದ್ಯಾರ್ಥಿನಿಯರು ಮಾನವೀಯ ಮೌಲ್ಯಗಳನ್ನು ಕುರಿತು ಭವ್ಯ ಭಾರತದ ನಿರ್ಮಾಣಕ್ಕೆ ಸಂಕಲ್ಪ ಮಾಡಿ ಅದಕ್ಕೆ ಕಂಕಣಬದ್ಧರಾಗಲು ಸರ್ವಸನ್ನದ್ಧರಾಗಬೇಕು ಎಂದು ಹೇಳಿದರು.

ಅಧ್ಯಕ್ಷತೆಯನ್ನು ಶ್ರೀ ನೀಲನಗೌಡ. ಬಿರಾದಾರ, ಅಧ್ಯಕ್ಷರು ಗ್ರಾಮ ಪಂಚಾಯತಿ ರೋಣಿಹಾಳ ವಹಿಸಿದ್ದರು. ಶ್ರೀ ಜೆ.ಎಸ್. ಬೋಳಸೂರ. ಜಿಲ್ಲಾ ಖಜಾಂಚಿಗಳು ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಜಿಲ್ಲಾ ಘಟಕ ವಿಜಾಪುರ. ಇವರು ಹಾಗೂ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಕಾರ್ಯದರ್ಶಿಗಳು ಶ್ರೀ ಎಸ್.ಬಿ. ಬಿರಾದಾರ ಪಾಟೀಲ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಮಂಜುನಾಥ ಪೂಜಾರಿ ಇವರು ಅತಿಥಿಗಳಾಗಿ ಆಗಮಿಸಿದ್ದರು.

ಶಿಬಿರಕ್ಕೆ ನಾಯಕರಾಗಿ ಶ್ರೀ ಎಸ್.ಎಸ್. ಹುಬ್ಬಳ್ಳಿ, ಹೆಚ್.ಡಬ್ಲ್ಯೂ.ಬಿ. (ಎಸ್.) ತಾಲೂಕು ಕಾರ್ಯದರ್ಶಿಗಳು ಬ.ಬಾಗೇವಾಡಿ ಇವರು ವಹಿಸಿಕೊಂಡಿದ್ದರು. ಗೈಡ್ಸ್ ವಿಭಾಗದಲ್ಲಿ ಶ್ರೀಮತಿ ಎಸ್.ಬಿ. ಶೀಲವಂತ, ಶ್ರೀಮತಿ ಎಸ್.ಎಂ. ಕರಣೇ ಇವರು ಸಹಾಯಕ ನಾಯಕಿಯರಾಗಿ ಕಾರ್ಯನಿರ್ವಹಿಸಿದರು. ತಾಲೂಕಿನ ವಿವಿಧ ಶಾಳೆಗಳಂದ ಸುಮಾರು 150 ಸ್ಕೌಟ್ಸ್ /ಗೈಡ್ಸ್‌ಗಳು ಭಾಗವಹಿಸಿದ್ದರು.

## ಮಂಗಳೂರು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ, ಮಂಗಳೂರು, ಉಪ್ಪಿನಂಗಡಿ ಸ್ಥಳೀಯ ಸಂಸ್ಥೆ ಹಾಗೂ ಶ್ರೀ ಗೋಪಾಲಕೃಷ್ಣ ಪ್ರೌಢಶಾಲೆ ಬಿಳನೆಲೆ ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 15,16 ಮತ್ತು 17ನೇ ಡಿಸೆಂಬರ್ 2009 ರಂದು ಜಿಲ್ಲಾ ಸ್ಕೌಟ್ಸ್ ಗೈಡ್ಸ್ ಮೇಳ ನಡೆಯಿತು.

ಶ್ರೀ ಸುಬ್ರಮಣ್ಯ ಮಠದ ಶ್ರೀ ಶ್ರೀ ವಿದ್ಯಾಪ್ರಸನ್ನತೀರ್ಥ ಸ್ವಾಮೀಜಿಯವರು ದೀಪ ಬೆಳಗಿಸಿ ಶುಭ ಹಾರೈಸಿ, ಸಂಸ್ಕಾರಯುತ ಸಮಾಜನಿರ್ಮಾಣದಲ್ಲಿ ಸ್ಕೌಟ್ ಗೈಡ್ಸ್‌ಗಳ ಜವಾಬ್ದಾರಿಯನ್ನು ತಿಳಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ, ಅಧ್ಯಕ್ಷತೆ ವಹಿಸಿ ಮಕ್ಕಳ ಚಾರಿತ್ರ್ಯ ನಿರ್ಮಾಣದಲ್ಲಿ ಶಿಕ್ಷಕರ ಮತ್ತು ಪಾಲಕರ ಕರ್ತವ್ಯಗಳನ್ನು ಒತ್ತಿ ಹೇಳಿದರು. ಸ್ಥಳೀಯ ಸಂಸ್ಥೆಯ ಗೌರವಾಧ್ಯಕ್ಷ ಪುತ್ತೂರು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಶೇಷಶಯನ ಅವರು ಸ್ಕೌಟ್ ಗೈಡ್‌ಗಳು ಉತ್ತಮ ಗುಣ ನಡತೆಯಿಂದ ಸಮಾಜ ನಿರ್ಮಾಣ ಮಾಡಬೇಕೆಂದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಅಬ್ರಹಾಂ ವರ್ಗೀಸ್ ಸ್ವಾಗತಿಸಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಯು. ಗೋಪಾಲಕೃಷ್ಣ ಭಟ್ ವಂದನಾರ್ಪಣೆಗೈದರು. ವೇದಿಕೆಯಲ್ಲಿ ಶಿಕ್ಷಣ ಸಮನ್ವಯಾಧಿಕಾರಿ ಶ್ರೀ ಬಿ.ಜಿ. ಬಾಗೇವಾಡಿ, ಸ್ಥಳೀಯ ಸಂಸ್ಥೆಯ ಕಾರ್ಯಾಧ್ಯಕ್ಷ ಶ್ರೀ ಐತಪ್ಪ ನಾಯ್ಕ, ಆದಿತ್ಯ ಸಂಸ್ಥೆಯ ಸಂಚಾಲಕ

ಶ್ರೀ ನಾರಾಯಣ ಕಲ್ಲೂರಾಯ, ಕನ್ನಡ ಮಾಧ್ಯಮದ ಮುಖ್ಯ ಗುರು ಗೋಪಾಲಕೃಷ್ಣಭಟ್, ಆಂಗ್ಲ ಮಾಧ್ಯಮ ಪ್ರೌಢಶಾಲೆಯ ಶ್ರೀ ಜಯಸೀತಾರಾಮ, ಬಿಳನೆಲೆ ಗ್ರಾಮ ಪಂಚಾಯತ್ ಅಧ್ಯಕ್ಷ ಶ್ರೀ ಪ್ರಕಾಶ ಇವರುಗಳು ಉಪಸ್ಥಿತರಿದ್ದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಪುತ್ತೂರು ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಶೇಷಶಯನ ಅವರು ವಹಿಸಿದ್ದರು. ವೇದಿಕೆಯಲ್ಲಿ ನಿವೃತ್ತ ಪ್ರಾಂಶುಪಾಲರಾದ ಶ್ರೀ ರಾಮಶರ್ಮ, ಶ್ರೀಮತಿ ವಿಮಲ ರಂಗಯ್ಯ, ಶಿಕ್ಷಣ ಸಂಯೋಜಕರಾದ ಶ್ರೀ ಹರಿಕಿರಣ್ ಶಿಕ್ಷಕರ ತಾಲೂಕು ಸಂಘದ ಅಧ್ಯಕ್ಷ ಶ್ರೀ ರಾಜಕೃಷ್ಣ ಮಲಾರ್, ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಆರ್. ವೆಂಕಟ್ರಮಣ ಮೇಳದಲ್ಲಿ ನಡೆದ ಚಟುವಟಿಕೆಗಳ ವರದಿ ನೀಡಿದರು.

ದಿನಾಂಕ 10-01-2010 ರಿಂದ 12-01-2010ರ ವರೆಗೆ ರಾಜ್ಯ ಸಂಸ್ಥೆಯಿಂದ ನಡೆಸಲ್ಪಟ್ಟ ರಾಜ್ಯ ಪುರಸ್ಕಾರ ಸ್ಕೌಟ್ ಗೈಡ್ ಪರೀಕ್ಷಾ ಶಿಬಿರವು ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ನಡೆಯಿತು. ಸ್ಕೌಟ್ಸ್ ವಿಭಾಗದ ನಾಯಕತ್ವವನ್ನು ಶ್ರೀ ಎ.ಎಂ. ಶಂಕರ್ ಎಲ್.ಟಿ. (ರೋವರ್) ಮತ್ತು ಗೈಡ್ ವಿಭಾಗದ ನಾಯಕತ್ವವನ್ನು ಶ್ರೀಮತಿ ಸುಶೀಲಾ ಚೆಂಗಪ್ಪ ಎಲ್.ಟಿ. (ಗೈಡ್ಸ್) ವಹಿಸಿದ್ದರು. ಶಿಬಿರದ ಮೇಲ್ವಿಚಾರಕರಾಗಿ ರಾಜ್ಯ ಸಂಸ್ಥೆಯ ಜಂಟಿ ರಾಜ್ಯ ಕಾರ್ಯದರ್ಶಿ ಶ್ರೀ ಎನ್. ಶ್ರೀನಿವಾಸನ್ ಆಗಮಿಸಿದ್ದರು. ಇವರಿಗೆ ಸಹಾಯಕರಾಗಿ ಶ್ರೀ ಎಂ.ಜಿ. ಶಿವಕುಮಾರ್ (ಡಿ.ಟಿ.ಸಿ.) ಶಿವಮೊಗ್ಗಾ ಮತ್ತು ಸಿಸ್ಟರ್ ಸಿಂಥಿಯಾ ಆಗಮಿಸಿದ್ದರು.

ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜಯಂತಿಯನ್ನು ದಿನಾಂಕ 12-1-10 ರಂದು ಇದೇ ಸಂದರ್ಭದಲ್ಲಿ ಆಚರಿಸಲಾಯಿತು ಒಬ್ಬ ಸ್ಕೌಟ್, ಒಬ್ಬ ಗೈಡ್, ಸ್ವಾಮಿ ವಿವೇಕಾನದಂದರ ಬಗ್ಗೆ ಮಾತನಾಡಿದರು. ಶ್ರೀ ಎನ್. ಶ್ರೀನಿವಾಸನ್ ರವರು ಸ್ವಾಮಿ ವಿವೇಕಾನಂದರ ಜೀವನ ಹಾಗು ಸಂದೇಶದ ಬಗ್ಗೆ ಮಾತನಾಡಿದರು.

ಮಂಗಳೂರು, ಉಡುಪಿ ಮತ್ತು ಚಿಕ್ಕಮಗಳೂರು ಜಿಲ್ಲೆಗಳಿಂದ ಸ್ಕೌಟ್ ವಿಭಾಗದಿಂದ 75 ಸ್ಕೌಟ್ಸ್ ಹಾಗೂ ಗೈಡ್ ವಿಭಾಗದಿಂದ 168 ಗೈಡ್ಸ್ ಭಾಗವಹಿಸಿದ್ದರು.

ದಿನಾಂಕ 12-1-2010 ರಿಂದ 13-1-2010ರ ವರೆಗೆ ಕಬ್ ಮತ್ತು ಬುಲ್ ಬುಲ್‌ಗಳ ಚತುರ್ಥ ಚರಣ್ ಮತ್ತು ಹೀರಕ್ ಪಂಖ್ ಪರೀಕ್ಷಾ ಶಿಬಿರವು ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ನಡೆಯಿತು. ಕಬ್ ವಿಭಾಗಕ್ಕೆ ಶ್ರೀರಾಮರಾಮ್ ಎಲ್.ಟಿ. (ಕಬ್ಸ್) ಮತ್ತು ಬುಲ್ ಬುಲ್ ವಿಭಾಗಕ್ಕೆ ಸಿಸ್ಟರ್ ಲೋರಿನಾ ನಾಯಕರಾಗಿದ್ದರು. ಜಿಲ್ಲೆಯ ಕಬ್ ಮಾಸ್ಟರ್‌ಗಳು ಮತ್ತು ಫ್ಲಾಕ್ ಲೀಡರ್‌ಗಳು ಸಹಕರಿಸಿದರು. ಶ್ರೀ ಸಂಜೀವ, ಶ್ರೀಮತಿ ರವಿಕಲಾ ಜಿಲ್ಲಾ ಸಂಘಟಕರಾದ ಎಸ್.ಎನ್. ಗೋಪಲಕೃಷ್ಣ ಇವರುಗಳು ಈ ಪರೀಕ್ಷಾ ಶಿಬಿರಗಳು ಯಶಸ್ವಿಯಾಗುವಲ್ಲಿ ಸಹಕರಿಸಿದರು.

ದಿನಾಂಕ 14-1-2010 ರಂದು ಯುವ ದಿನಾಚರಣೆಯ ಪ್ರಯುಕ್ತವಾಗಿ ಜಿಲ್ಲಾ ಸ್ಕೌಟ್ ಗೈಡ್ ಭವನ ಮಂಗಳೂರಿನಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ.ಕೈರನ್ನ ರ ಅಧ್ಯಕ್ಷತೆಯಲ್ಲಿ ರಾಷ್ಟ್ರಪತಿ ಸ್ಕೌಟ್ ಗೈಡ್, ಪ್ರವೀಣ ರೋವರ್ ರೇಂಜರ್, ಹಿರಕ್ ಪಂಖ್ ಬುಲ್ ಬುಲ್ ಪ್ರಮಾಣ ಪತ್ರಗಳನ್ನು ಜಿಲ್ಲಾ ಆಯುಕ್ತರು (ಗೈಡ್ಸ್) ಫಿಲೋಮಿನಾ ಲೋಬೋ ಪ್ರಾಂಶುಪಾಲರು ಜಿಲ್ಲಾ ಶಿಕ್ಷಕರ ತರಬೇತಿ ಕೇಂದ್ರ ಇವರು ವಿತರಿಸಿ ಶುಭ ಹಾರೈಸಿದರು. ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಎಸ್. ಎಸ್. ಕಾರ್ಣಿಕ್, ಎ.ಡಿ.ಸಿ,(ಸ್ಕೌಟ್ಸ್) ರವರು ಉಪಸ್ಥಿತರಿದ್ದರು. ಕೋಶಾಧಿಕಾರಿ ವಾಸುದೇವ ಬೋಳೂರು ಧನ್ಯವಾದ ನೀಡಿದರು. ಶ್ರೀಪ್ರತೀಮ್ ಕುಮಾರ್ ಎಲ್.ಟಿ. (ಸ್ಕೌಟ್ಸ್) ಕಾರ್ಯಕ್ರಮ ನಿರ್ವಹಿಸಿದ್ದರು.

## ರಾಯಚೂರು

ದಿನಾಂಕ 17-12-2009 ರಿಂದ 23-12-2009ರ ವರೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಮೂಲ ತರಬೇತಿ ಶಿಬಿರವನ್ನು ಡಯಟ್ ಅನುದಾನದಲ್ಲಿ ದೇವಸಗೂರಿನ ಶ್ರೀ ಸೂಗೂರೇಶ್ವರ ದೇವಸ್ಥಾನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಶಿಬಿರವನ್ನು ಡಯಟ್ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸಿದ್ಧಲಿಂಗಯ್ಯಸ್ವಾಮಿ ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ಮಾತನಾಡಿ ನೆಮ್ಮದಿಯ ಜೀವನ ನಡೆಸಲುಮ ಸಮಾಜಸೇವೆ ಮಾಡಲು ಸ್ಕೌಟ್‌ಗೆ ಸೇರಬೇಕೆಂದು ಕರೆನೀಡಿದರು. ಈ ಶಿಬಿರದ ನಾಯಕರಾಗಿ ಶ್ರೀ ಶರಾಫ್ ಮಾದಪ್ಪ ಎಲ್.ಟಿ. (ಸ್ಕೌ) ಮತ್ತು ಶ್ರೀಮತಿ ಕೆ.ಕೆ. ಲೀಲಾ ಎಲ್.ಟಿ. (ಗೈ) ಆಗಮಿಸಿದ್ದರು. ಮುಖ್ಯ ಅತಿಥಿಗಳಾಗಿ ರಾಜ್ಯ ಸಂಘಟನಾ ಆಯುಕ್ತ (ಸ್ಕೌ) ಶ್ರೀ ನಾರಾಯಣ ಶೆಟ್ಟಿ ಮಾತನಾಡಿ ಸ್ಕೌಟ್‌ನ ಹಿನ್ನಲೆಯನ್ನು ವಿವರಿಸಿದರು.

ವೇದಿಕೆಯಲ್ಲಿ ಶ್ರೀ ಹೆಚ್. ಹನುಮಂತಪ್ಪ, ಖಜಾಂಚಿ, ಶ್ರೀ ಗೋವಿಂದರಾಜು, ಶ್ರೀಮತಿ ಅಜೀಜಾ ಸುಲ್ತಾನಾ, ಜಿಲ್ಲಾ ಆಯುಕ್ತರು (ಗೈ) ಮತ್ತು ಶ್ರೀ ಆರ್.ಹೆಚ್. ಸಾಗರ ಉಪಸ್ಥಿತರಿದ್ದರು.

ಶಿಬಿರದಲ್ಲಿ 28. ಸ್ಕೌಟ್ ಮತ್ತು 22 ಗೈಡ್ ಶಿಬಿರಾರ್ಥಿಗಳು ಭಾಗವಹಿಸಿದ್ದರು. ಮುಕ್ತಾಯ ಸಮಾರಂಭದಲ್ಲಿ ಮುಖ್ಯ

ಅತಿಥಿಯಾಗಿ ಶ್ರೀ ಅಮೃತ ಬೆಟ್ಟದ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು ಹಾಗೂ ಶ್ರೀಮತಿ ಆರ್. ಇಂದಿರಾ ಕ್ಷೇತ್ರ ಶಿಕ್ಷಣಾಧಿಕಾರಿಗಳು ಭಾಗವಹಿಸಿದ್ದರು. ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಸ್ವಾಗತ ಹಾಗೂ ಪ್ರಾಸ್ತಾವಿಕವಾಗಿ ಡಾ. ಆರ್. ನರಸಿಂಹಮೂರ್ತಿ ಜಿಲ್ಲಾ ಆಯುಕ್ತರು (ಸ್ಕೌಟ್) ಮಾತನಾಡಿದರು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀ ರಾವುತರಾವ್ ಬರೂರ ಡಿ.ಓ.ಸಿ. ಮಾಡಿದರು. ಶ್ರೀ ಅಮರೇಗೌಡ ಪಾಟೀಲ್ ಜಿಲ್ಲಾ ಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು.

## ಉಡುಪಿ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್ ಗೈಡ್ಸ್ ಪಟಾಲಂ ನಾಯಕರ ತರಬೇತಿ ಶಿಬಿರವನ್ನು ಶ್ರೀ ವಿಷ್ಣುಮೂರ್ತಿ ದೇವಸ್ಥಾನ ಪಡು ಅಲೆವೂರು, ಉಡುಪಿ ಇಲ್ಲಿ ನಡೆಸಲಾಯಿತು.

ಶಿಬಿರದ ಉದ್ಘಾಟನೆಯನ್ನು ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖರ ಪೂಜಾರಿ, ಶ್ರೀ ಎಂ. ಪ್ರಭಾಕರ ಭಟ್, ರಾಜ್ಯ ಸಹಾಯಕ ಸಂಘಟನಾ ಆಯುಕ್ತ (ಸ್ಕೌಟ್ಸ್), ಸ್ಥಾನೀಯ ಆಯುಕ್ತ ಶ್ರೀ ಬಿ. ಆನಂದ ಅಡಿಗ, ಜಿಲ್ಲಾ ಸಹಕಾರ್ಯದರ್ಶಿ ಶ್ರೀ ವಿ.ಜಿ. ಬೈಕಾಡಿ ಉಪಸ್ಥಿತರಿದ್ದರು. ವಲಯದ 165 ಸ್ಕೌಟ್ಸ್ – ಗೈಡ್ಸ್ ವಿದ್ಯಾರ್ಥಿಗಳು ಶಿಬಿರದ ಪ್ರಯೋಜನವನ್ನು ಪಡೆದರು.

ಶಿಬಿರದ ಸಮಾರೋಪ ಸಮಾರಂಭ ಶ್ರೀ ಲಕ್ಷ್ಮೀನಾರಾಯಣ ಭಟ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

### ಪುನಶ್ಚೇತನ ತರಬೇತಿ ಶಿಬಿರ

ಕುಂದಾಪುರ ಸ್ಥಳೀಯ ಸಂಸ್ಥೆಯ ಸ್ಕೌಟರ್ ಗೈಡರ್ ಗಳಿಗೆ ಒಂದು ದಿನದ ಪುನಶ್ಚೇತನ ಶಿಬಿರವು ಕುಂದಾಪುರದ ಸಂಸ್ಥಾ ಕಛೇರಿಯಲ್ಲಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ದಿನಕರ್ ಶೆಟ್ಟಿಯವರ ಉಪಸ್ಥಿತಿಯಲ್ಲಿ ನಡೆದಿತ್ತು. ವಲಯದ 36 ಶಿಕ್ಷಕ-ಶಿಕ್ಷಕಿಯರು ಪ್ರಯೋಜನವನ್ನು ಪಡೆದರು. ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಬಿ. ಆನಂದ ಅಡಿಗ, ಶ್ರೀ ಎಂ. ಪ್ರಭಾಕರ್ ಭಟ್, ಶ್ರೀ ಮಂಜುನಾಥ ಕೆ.ಎಸ್., ಶ್ರೀ ಆನಂದ ಪೂಜಾರಿ, ಶ್ರೀಮತಿ ಫ್ಲೋರಿನ್ ನೊರೊಹ್ನಾ ಸಹಕರಿಸಿದರು.

ಪಟಾಲಂ ನಾಯಕರ ತರಬೇತಿ

ಕುಂದಾಪುರ ಸ್ಥಳೀಯ ಸಂಸ್ಥೆಯ ಪಟಾಲಂ ನಾಯಕರ ತರಬೇತಿ ಶಿಬಿರವು ಕುಂದಾಪುರದ ಸಂಸ್ಥಾ ಕಛೇರಿಯಲ್ಲಿ ನಡೆದಿತ್ತು. ವಲಯದ 120 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪ್ರಯೋಜನವನ್ನು ಪಡೆದರು. ಅಧ್ಯಕ್ಷತೆಯನ್ನು ಶ್ರೀ ದಿನಕರ್ ಶೆಟ್ಟಿ ವಹಿಸಿದ್ದರು. ಶ್ರೀ ಆನಂದ ಪೂಜಾರಿ ಶಿಬಿರದ ನಾಯಕತ್ವವನ್ನು ವಹಿಸಿದ್ದರು. ಶ್ರೀ ಎಂ. ಪ್ರಭಾಕರ್ ಭಟ್, ಎ.ಎಸ್. ಓ.ಸಿ. (ಸ್ಕೌಟ್ಸ್) ಸಹಕರಿಸಿದ್ದರು.

## ಮಂಡ್ಯ

ಮಳವಳ್ಳಿ ತಾಲೂಕಿನ ಹಿಟ್ಟನ ಕೊಪ್ಪಲು ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸ್ಕೌಟ್ ಘಟಕದ ವತಿಯಿಂದ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವನ್ನು ಇತ್ತೀಚೆಗೆ ಏರ್ಪಡಿಸಲಾಗಿತ್ತು. ತಾಲೂಕಿನಲ್ಲಿ ಅತಿ ಹೆಚ್ಚು ಅಂಕ ಪಡೆದ ವಿದ್ಯಾರ್ಥಿಗಳಿಗೆ, ತಹಸಿಲ್ದಾರ್ ಶ್ರೀಮತಿ ಆರ್. ಸಂಧ್ಯಾರವರು ಪುರಸ್ಕಾರ ನೀಡಿದರು.

ಇದೇ ಶಾಲೆಯಲ್ಲಿ ಕಣ್ಣಿನ ತಪಾಸಣೆ ಶಿಬಿರವನ್ನು ಇತ್ತೀಚೆಗೆ ಹಮ್ಮಿಕೊಳ್ಳಲಾಗಿತ್ತು. ಡಾ|| ನಾಗೇಂದ್ರ, ಡಾ|| ಯದುಶ್ರೀ ಕಣ್ಣಿನ ತಪಾಸಣೆ ನಡೆಸಿದರು.

ಜ್ಞಾನಗಂಗಾ ಗ್ರಾಮೀಣ ಮತ್ತು ನಗರಾಭಿವೃದ್ಧಿ ಸಂಸ್ಥೆ ಹಾಗೂ ಶಾಲೆಯ ಸ್ಕೌಟ್ ಘಟಕದ ಸಂಯುಕ್ತಾಶ್ರಯದಲ್ಲಿ ವಿದ್ಯಾರ್ಥಿಗಳ ರಕ್ತದ ಗುಂಪಿನ ಪರೀಕ್ಷೆಯನ್ನು ನಡೆಸಲಾಯಿತು. ಶ್ರೀಮತಿ ರಾಧಾರವರು ಪರೀಕ್ಷೆ ನಡೆಸಿದರು. ಜ್ಞಾನಗಂಗಾ ಸಂಸ್ಥೆಯ ನಿರ್ದೇಶಕ ಶ್ರೀ ಗಂಗರಾಜು ಗುರುತಿನ ಪತ್ರ ವಿತರಿಸಿದರು.

ಈ ಎಲ್ಲಾ ಕಾರ್ಯಕ್ರಮಗಳ ನೇತೃತ್ವವನ್ನು ಸ್ಕೌಟ್ ಶಿಕ್ಷಕ ಶ್ರೀ ಮಹಾದೇವ ಸ್ವಾಮಿಯವರು ವಹಿಸಿದ್ದರು.

## State Level Youth Meet

**The Bharat Scouts and Guides, Karnataka Organising a State Level Youth Meet from 3rd to 6th February 2010 at Papaiah Hall, Bellary.**

**The Bellary District Association, is Hosting the State Lavel Event.**

## ಉತ್ತರ ಕನ್ನಡ

ಸಿದ್ಧಾಪುರದ ಬಾಲಭವನದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ನಡೆದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕರ ಕಾರ್ಯಾಗಾರವನ್ನು ತಾಲ್ಲೂಕು ಪಂಚಾಯತ ಕಾರ್ಯನಿರ್ವಹಣಾಧಿಕಾರಿ ಶ್ರೀ ವಿ.ಎನ್. ಹೆಗಡೆಯವರು ಉದ್ಘಾಟಿಸಿದರು. ತಾಲ್ಲೂಕು ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧ್ಯಕ್ಷರು ಆದ ತಹಶಿಲ್ದಾರ ಗಣಪತಿ ಕಟ್ಟಿನಕೆರೆ ಇವರು ಅಧ್ಯಕ್ಷತೆ ವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿ ಬಿ.ವಿ. ನಾಯಕ್, ಮುಖ್ಯ ಅತಿಥಿಗಳಾಗಿದ್ದರು. ತಾಲೂಕ ಅಕ್ಷರ ದಾಸೋಹದ ಸಹಾಯಕ ನಿರ್ದೇಶಕರಾದ ಜಿ.ಎಂ. ನಾಯ್ಕ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಉಪಾಧ್ಯಕ್ಷರಾದ ಶ್ರೀ ಜಿ.ಜಿ. ಹೆಗಡೆ ಬಾಳಗೋಡ, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಡಿ ಫರ್ನಾಂಡೀಸ್ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎಸ್.ಎಂ. ಲೋಪೀಸ್ ಮಾತನಾಡಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕಾರ್ಯದರ್ಶಿ ಶ್ರೀ ಪಿ.ಎಂ. ಶಿರಾಲಿ ಸ್ವಾಗತಿಸಿದರು. ಶ್ರೀ ಜಿ.ಜಿ. ಹೆಗಡೆ ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಕೆ. ಟಿ. ನಾಯ್ಕ ವಂದನಾರ್ಪಣೆ ಮಾಡಿದರು. ಇದೇ ಸಂದರ್ಭದಲ್ಲಿ ಸರಕಾರಿ ಪ್ರೌಢಶಾಲೆ ಲಂಬಾಪುರದ ಪ್ರಗತಿ ಸ್ಕೌಟ್ಸ್ ಮತ್ತು ಪ್ರತಿಭಾ ಗೈಡ್ಸ್ ವಿದ್ಯಾರ್ಥಿಗಳು ನೆರೆಸಂತ್ರಸ್ತರಿಗೆ ಸಂಗ್ರಹಿಸಿದ 6404/- ರೂಗಳ ಚೆಕ್ಕನ್ನು ಮುಖ್ಯಮಂತ್ರಿ ಪರಿಹಾರಿನಿಧಿಗೆ ರವಾನಿಸಲು ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಾದ ಸುಬ್ರಹ್ಮಣ್ಯ ಆಚಾರಿ, ರಚನಾ ಹೆಗಡೆ ಇವರು ತಹಶಿಲ್ದಾರರಿಗೆ ನೀಡಿದರು.

## ಕೋಲಾರ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಜ್ಯ ಸಂಸ್ಥೆ ಹಾಗೂ ಕೋಲಾರ ಜಿಲ್ಲಾ ಸಂಸ್ಥೆಯ ವತಿಯಿಂದ ದಿನಾಂಕ : 16-1-2010 ರಂದು ಪತ್ರಕರ್ತರ ಭವನ ಕೋಲಾರ ಇಲ್ಲಿ ನಡೆದ ವಿಭಾಗೀಯ ಮಟ್ಟದ ಕಾರ್ಯದರ್ಶಿಗಳ ಹಾಗೂ ಸಹಾಯಕ ಆಯುಕ್ತರುಗಳ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದ ಉದ್ಘಾಟನೆಯನ್ನು ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀಯುತ ಎನ್. ಶ್ರೀನಿವಾಸನ್ ರವರು ಮಾಡಿ ಎಲ್ಲಾ ಕಾರ್ಯದರ್ಶಿಗಳು ತಮ್ಮ ವ್ಯಾಪ್ತಿಯಲ್ಲಿ ಉತ್ತಮ ಯೋಜನೆಯನ್ನು ಹಮ್ಮಿಕೊಂಡು ಕಾರ್ಯ ಕ್ರಮವನ್ನು ನಡೆಸಬೇಕೆಂದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕೋಲಾರ ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀಯುತ ಕೆ.ವಿ. ಶಂಕರಪ್ಪ ವಹಿಸಿ ಮಾತನಾಡುತ್ತಾ ಕಾರ್ಯದರ್ಶಿಗಳು ಮತ್ತು ಸಹಾಯಕ ಆಯುಕ್ತರುಗಳು ತಮ್ಮ ವ್ಯಾಪ್ತಿಯಲ್ಲಿ ಉತ್ತಮವಾಗಿ ಕೆಲಸ ನಿರ್ವಹಿಸಿ ಸಂಸ್ಥೆಯ ಸೇವೆಯನ್ನು ಪ್ರತಿಯೊಬ್ಬ ನಾಗರೀಕರಿಗೂ ಸಿಗುವಲ್ಲಿ ಪ್ರಯತ್ನಿಸಬೇಕು ಎಂದು ಅಭಿಪ್ರಾಯ ಪಟ್ಟರು.

ಇದೇ ಸಂದರ್ಭದಲ್ಲಿ ನೂತನವಾಗಿ ಆಯ್ಕೆಯಾದ ವಿಧಾನ ಪರಿಷತ್ ಸದಸ್ಯರಾದ ಶ್ರೀಯುತ ನಜೀರ್ ಅಹಮ್ಮದ್ ರವರನ್ನು ಜಿಲ್ಲಾ ಸಂಸ್ಥೆ ವತಿಯಿಂದ ಸನ್ಮಾನಿಸಲಾಯಿತು. ಶ್ರೀಯುತರು ನನ್ನ ಸೇವೆ ಸದಾ ಈ ಸಂಸ್ಥೆಗೆ ಇರುವುದು. ನೀವುಗಳು ಈ ಅನುಕೂಲವನ್ನು ಸದುಪಯೋಗಪಡಿಸಿಕೊಳ್ಳಬೇಕೆಂದರು.

ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಸ್ಕೌಟ್ಸ್ ಜಿಲ್ಲಾ ಆಯುಕ್ತರಾದ ಶ್ರೀಯುತ ಚಾಂದ್ ಪಾಷ, ಗೈಡ್ ಆಯುಕ್ತರಾದ ಶ್ರೀಮತಿ ಜಯಶ್ರೀ, ರಾಜ್ಯ ಸಂಸ್ಥೆಯ ಸಂಪರ್ಕಾಧಿಕಾರಿಗಳಾದ ಶ್ರೀಯುತ ಚಲ್ಲಯ್ಯರವರು ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ಬೆಂಗಳೂರು ವಿಭಾಗದಿಂದ ಆಗಮಿಸಿದ್ದ 40 ಸ್ಕೌಟ್-ಗೈಡ್ ಬಳಗದವರು ಹಾಜರಿದ್ದರು.

ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಮತ್ತು ಸಹಾಯಕ ಜಿಲ್ಲಾ ಆಯುಕ್ತರುಗಳ ಜವಾಬ್ದಾರಿ ಮತ್ತು ಕರ್ತವ್ಯಗಳ ಬಗ್ಗೆ ಸಮಾವೇಶದಲ್ಲಿ ಚರ್ಚಿಸಲಾಯಿತು. 20-10-2011 ನೇ ಸಾಲಿನ ವಾರ್ಷಿಕ ಯೋಜನೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ದರ್ಶನ 2013 ಇವೇ ಮುಂತಾದ ವಿಷಯಗಳ ಬಗ್ಗೆ ಸಮಾವೇಶದಲ್ಲಿ ಚರ್ಚಿಸಲಾಯಿತು.

ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕಿನ ಭೈರಪಲ್ಲಿ ಗ್ರಾಮದ ಶ್ರೀ ಭೈರವೇಶ್ವರ ವಿದ್ಯಾನಿಕೇತನದಲ್ಲಿ ದಿನಾಂಕ : 20-1-2010 ರಂದು ನೂತನ ಸ್ಕೌಟ್/ಗೈಡ್ ದಳಗಳ ಉದ್ಘಾಟನಾ ಸಮಾರಂಭ ಜರುಗಿತು. ಜಂಟಿ ರಾಜ್ಯ ಕಾರ್ಯದರ್ಶಿ

ಹಾಗೂ ಕೋಲಾರ ಜಿಲ್ಲೆಯ ಸಂಯೋಜಕರಾದ ಶ್ರೀ ಎನ್. ಶ್ರೀನಿವಾಸನ್ ರವರು ನೂತನ ದಳಗಳನ್ನು ಉದ್ಘಾಟಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಜಯಶ್ರೀ ಜಿಲ್ಲಾ ಖಜಾಂಚಿಗಳಾದ ಶ್ರೀ ಬಿಸಪ್ಪ ಗೌಡರು, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವ್ಹಿ. ಜನಾರ್ದನ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಭೈರವೇಶ್ವರ ವಿದ್ಯಾನಿಕೇತನದ ಕಾರ್ಯದರ್ಶಿಗಳು ಹಾಗೂ ಶ್ರೀನಿವಾಸಪುರ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎಂ. ಶ್ರೀರಾಮ ರೆಡ್ಡಿ ಅವರು ಅಧ್ಯಕ್ಷತೆ ವಹಿಸಿದ್ದರು. ವಿದ್ಯಾಸಂಸ್ಥೆಯ ಆಡಳಿತಾಧಿಕಾರಿಗಳಾದ ಶ್ರೀ ಎಸ್. ಮುನಿರೆಡ್ಡಿ ಅವರು ಅತಿಥಿಗಳನ್ನು ಸ್ವಾಗತಿಸಿದರು. ಶಾಲೆಯ ಗೈಡ್ ಕ್ಯಾಪ್ಟನ್ ಕು॥ ಪ್ರೇಮಕುಮಾರಿ ವಂದಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ವ್ಹಿ. ನಾರಾಯಣಸ್ವಾಮಿ ಕಾರ್ಯಕ್ರಮ ನಿರೂಪಿಸಿದರು. ಜಿಲ್ಲಾ ಪದಾಧಿಕಾರಿಗಳು, ಶ್ರೀನಿವಾಸಪುರ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಶಾಲೆಯ ಸಿಬ್ಬಂದಿ ವರ್ಗ ಹಾಗೂ ಶಾಲೆಯ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ದಿನಾಂಕ 26-12-2009 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಬಂಗಾರಪೇಟೆ ಸ್ಥಳೀಯ ಸಂಸ್ಥೆ ರ್‍ಯಾಲಿಯನ್ನು ಹಮ್ಮಿಕೊಳ್ಳಲಾಗಿತ್ತು. ರ್‍ಯಾಲಿಯ ಪಥಸಂಚಲನವನ್ನು ಡಯಟ್‌ನ ಉಪನ್ಯಾಸಕರಾದ ಶ್ರೀಯುತ ಮಹದೇವ್ ರವರು ಹಸಿರು ನಿಶಾನೆ ತೋರಿ ಚಾಲನೆ ಕೊಟ್ಟರು. ನಂತರ ಕ್ಷೇತ್ರ ಸಂಪನ್ಮೂಲ ಕೇಂದ್ರ್ರದಲ್ಲಿ ನಡೆದ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಕಾರ್ಯದರ್ಶಿ ಶ್ರೀಯುತ ಎಂ.ವಿ. ಜನಾರ್ದನ್ ರವರು ವಹಿಸಿದ್ದರು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ತಾವೇ ತಯಾರಿಸಿದ ಶಿಬಿರೋಪಕರಣ'ಗಳ ಪ್ರದರ್ಶನ ನಡೆಯಿತು. ಈ ಕಾರ್ಯಕ್ರಮದಲ್ಲಿ ಸುಮಾರು 250 ಸ್ಕೌಟ್ / ಗೈಡ್‌ಗಳು ಭಾಗವಹಿಸಿದ್ದರು.



## Gone Home

**The Bharat Scouts and Guides, Karnataka record with deep regret the sad demise of Smt. K.S. Kamala District Commissioner (Guides) and Head Mistress, (Retd). Someshwara Girls High School and Sister of Late Sri K. Shankar, Former State Training Commissioner (S) Tumkur. Who passed away on 4-1-2010 at Bangalore at the age of 76 years after brief illness.**

**She served the Movement in Tumkur District, since 1950 as Guide, Guider, Assistant District Commissioner(G) and presently as District Commissioner (G) and involved in the activities of the Movment for more than six decades.**

**We pray God Almighty to give necessary strength and Courage to the members of the Bereaved family to Bear this Irreparable Loss.**

**May Her Soul Rest in Peace.**

# ಅನುಭಾವ

– ಗೊ.ರು. ಚನ್ನಬಸಪ್ಪ

'ಅನುಭವ' ಎಂಬ ಶಬ್ದವಂತೂ ನಮಗೆ ಚಿರಪರಿಚಿತ. ನಮ್ಮ ಬದುಕಿನ ಕ್ಷಣ ಕ್ಷಣವೂ ಒಂದು 'ಅನುಭವ'ವೇ. ಆದರೆ 'ಅನುಭಾವ' ಎನ್ನುವುದು ಯಾವುದು? ಸರಳಗೊಳಿಸಿ ಹೇಳಬಹುದಾದರೆ ನಾವು ನಿತ್ಯ ಜೀವನದಲ್ಲಿ ಪಡೆಯುವ ಸುಖ-ದುಃಖಗಳ ಒಂದು ಸ್ಥಿತಿ 'ಅನುಭವ' ಎನಿಸಿಕೊಳ್ಳುತ್ತದೆ. ಅದೇ ಅನುಭವ ದಿವ್ಯವಾದರೆ 'ಅನುಭಾವ'ವಾಗುತ್ತದೆ. ಅದನ್ನು **Divine Experience** ಅಥವಾ **Mystic Experience** ಎಂದು ಕರೆಯುತ್ತಾರೆ. ಅನುಭವ ಮತ್ತು ಅನುಭಾವ - ಇವೆರಡಕ್ಕಿರುವ ವ್ಯತ್ಯಾಸವೆಂದರೆ, 'ಅನುಭವ'ವನ್ನು ಒಂದು ರೀತಿಯಲ್ಲಿ ವಿವರಿಸಲಾದರೂ, 'ಅನುಭಾವ' ಎನ್ನುವುದು ಮೂಕ ಕಂಡ ಕನಸು. ಅದನ್ನು ಮೌನವೇ ಅರ್ಥೈಸಬೇಕು.

'ಅನುಭಾವ' ಎಂಬುದು ಕೇವಲ ಅಕ್ಷರ ಶಬ್ದವಾಗದೆ ಸಾಕ್ಷಾತ್ಕಾರ ಶಬ್ದವಾದದ್ದು ಹನ್ನೆರಡನೆಯ ಶತಮಾನದ ವಚನಕಾರರಿಂದ. ಅವರ ಬದುಕೇ ಅನುಭವದ ಬದುಕು. ವಚನಕಾರರಲ್ಲಿ ಬರುವ 'ಅನುಭಾವ' ಶಬ್ದವನ್ನೇ ಬೌದ್ಧರಲ್ಲಿ 'ಪ್ರಜ್ಞಾ' ಎಂದೂ. ಜೈನರಲ್ಲಿ 'ಕೇವಲಜ್ಞಾನ' ವೆಂದೂ, ಅದ್ವೈತಿಗಳಲ್ಲಿ 'ಆರ್ಷಜ್ಞಾನ'ವೆಂದೂ, ಶೈವಾಗಮಗಳಲ್ಲಿ 'ತಾರಕ ಜ್ಞಾನ'ವೆಂದೂ ಕರೆಯಲಾಗಿದೆ ಎಂದು ವಿದ್ವಾಂಸರು ಹೇಳುತ್ತಾರೆ. 'ಅನುಭಾವ' ಎನ್ನುವುದು ಪರವಸ್ತು. ಅದೇ ಶರಣರ ಪರಿಭಾಷೆಯಲ್ಲಿ ಶೂನ್ಯ, ಬಯಲು. ಇದನ್ನೇ ಸಗುಣ ಬ್ರಹ್ಮವಾದಿ ರಾಮಾನುಜರು 'ಸುಖ ಪರ್ಯಾಯ' ಎಂದರೆ, ನಿರ್ಗುಣ ಬ್ರಹ್ಮವಾದಿ ಶಂಕರರು 'ಮೋಕ್ಷ' ಎಂದಿದ್ದಾರೆ.

'ಅನುಭಾವ'ಶಬ್ದದ ಅರ್ಥಗಳು ವಿವಿಧ ರೂಪದಲ್ಲಿ ಬಳಕೆಯಾಗಿದ್ದರೂ ಆ ಅರ್ಥಗಳೆಲ್ಲ ಆತ್ಮ ಸಂಬಂಧದ ಅರ್ಥಗಳೇ ಆಗಿವೆ. ಒಂದು ಕಡೆ, ಆತ್ಮ ಸಾಕ್ಷಾತ್ಕಾರದ ಹಂಬಲವುಳ್ಳವರು ಒಂದೆಡೆ ಸೇರಿ ನಡೆಸುವ ಆಧ್ಯಾತ್ಮಿಕ ಚರ್ಚೆ (**Spiritual discourse**) 'ಅನುಭಾವ' ಎಂದೆನಿಸಿದರೆ, ಮತ್ತೊಂದೆಡೆ, ಶರಣರು ಒಂದೆಡೆ ಸೇರಿ ನಡೆಸುವ ಗೋಷ್ಠಿಯೇ 'ಅನುಭಾವ' ಚಿಂತನೆಯಾಗುತ್ತದೆ. ಅನುಭಾವಕ್ಕೆ ದೈವ ಸಂಬಂಧದ ಜ್ಞಾನ, ದಿವ್ಯಜ್ಞಾನ, ಪರಬ್ರಹ್ಮದ ಅರಿವು, ಆತ್ಮವಿದ್ಯೆ, ಪರಮಾತ್ಮ-ಜೀವಾತ್ಮ ಸಾಮರಸ್ಯ, ಗುರುವಿನಿಂದ ಪಡೆಯುವ ಅರಿವು, ಪರಮಾತ್ಮನ ಚೈತನ್ಯಾಂಶ, ಚಿತ್ಕಳೆ - ಎಂಬೆಲ್ಲ ಅರ್ಥಗಳಿವೆ.

'ಅನುಭಾವ'ದ ಅರ್ಥವನ್ನು ವಿವರಿಸುತ್ತಾ ರಂ.ರಾ. ದಿವಾಕರ ಅವರು "ಅನುಭಾವ ಎಂದರೆ ಅಂಗಾಂಗ ಸಾಮರಸ್ಯದ ಸ್ಥಿತಿ . ಅದು ಇಂದ್ರಿಯ ಜನ್ಯವಲ್ಲ. ಅತೀಂದ್ರಿಯ, ಅತಿಮಾನಸ, ಅತಿಸೂಕ್ಷ್ಮ ಅನುಭವ. ಅದು ದ್ವಂದ್ವಾತೀತ ಮತ್ತು ತ್ರಿಗುಣ ರಹಿತ ಆನಂದದ ಸ್ಥಿತಿ" ಎಂದಿದ್ದಾರೆ. "ಅಂತರಂಗದಲ್ಲಿರುವ ಶಕ್ತಿಗಳನ್ನು ಜಾಗೃತಗೊಳಿಸಿ, ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವುದನ್ನು 'ಅನುಭಾವ' ಎಂದು ಹೇಳಬಹುದು" ಎಂದಿದ್ದಾರೆ, ಹಿರಿಯ ವಿದ್ವಾಂಸರಾದ ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು. 'ಕಡೆಯಿಲ್ಲ, ಮೊದಲಿಲ್ಲ, ತಡೆ ಬಿಡುಗಡೆಯಿಲ್ಲ, ಪಡಿಯಿಲ್ಲ, ಪಟ್ಟ್ಯಾಂತರವೆ ಇಲ್ಲ, ನುಡಿಯಿಲ್ಲ, ನೆನಹಿಲ್ಲ, ಅರಿವಿನೆಚ್ಚರುದೋರಲು, ಎಡೆಯಿಲ್ಲವೆಂದೆಂದು ಅದು ಪರಿಪೂರ್ಣ" ಎಂದಿದ್ದಾರೆ ನಿಜಗುಣ ಶಿವಯೋಗಿಗಳು.

ಅನುಭಾವ ಕೇವಲ ಆನಂದದ ಒಂದು ಅವಸ್ಥೆ. ಅದು 'ವಿಷಯಗಳಿಂದ ಆಗುವ ಇಹಲೋಕದ ಮಾನವಾನಂದವನ್ನು ಮೀರಿದ್ದು. ಹೆಚ್ಚೇನು ದೇವತೆಗಳ ಆನಂದಕ್ಕೂ ಮಿಗಿಲಾದುದು' ಎಂದು ಹೇಳಲಾಗಿದೆ. ನಿಜಗುಣ ಶಿವಯೋಗಿಗಳೇ ಹೇಳುವಂತೆ 'ಅನುಭಾವ'ವು ಮಾತು-ಮನಂಗಳಿಂದತ್ತತ್ತ ಮೀರಿದ ಸಾತಿಶಯದ ನಿರುಪಾಧಿಕ ನಿರ್ಮಲ ಪರಂಜ್ಯೋತಿ!

ಇದನ್ನು ಗಮನಿಸಿದಾಗ ಅನುಭವಕ್ಕೂ - ಅನುಭಾವಕ್ಕೂ ಇರುವ ಅಂತರದ ಅರಿವಾಗುತ್ತದೆ. 'ನಮ್ಮ ಜಾಗೃತ್ ಸ್ವಪ್ನಗಳಲ್ಲಿ ನೇತ್ರಾದಿ ಇಂದ್ರಿಯ ಜನಿತವಾದ ಆಗು-ಹೋಗುಗಳು 'ಅನುಭವ' ಎನಿಸಿಕೊಂಡರೆ, ಆಧ್ಯಾತ್ಮಿಕ ಸಾಧನೆಯಿಂದ ಉಂಟಾಗುವ ಅತೀಂದ್ರಿಯವಾದ ಆತ್ಮಾನುಭವ 'ಅನುಭಾವ' ಎಂದನಿಸಿಕೊಳ್ಳುತ್ತದೆ, ಎಂಬ ಪ್ರಾಜ್ಞರ ಮಾತು ಅರ್ಥಪೂರ್ಣವಾಗಿದೆ.

"ಆನೆಂಬುದಿಲ್ಲ ನೀನೆಂಬುದಿಲ್ಲ,
ಸ್ವಯವೆಂಬುದಿಲ್ಲ, ಪರವೆಂಬುದಿಲ್ಲ,
ಅರಿವೆಂಬುದಿಲ್ಲ, ಮರೆವೆಂಬುದಿಲ್ಲ,
ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ.
ಕೂಡಲ ಚನ್ನಸಂಗಯ್ಯನೆಂಬ ಶಬ್ದ ಮುನ್ನಿಲ್ಲ!"

ಸಮ್ಯಜ್ಞಾನಿ ಚನ್ನಬಸವಣ್ಣನ ಈ ವಚನ 'ಅನುಭಾವ' ಸ್ಥಿತಿಯನ್ನು ಕುರಿತು ಹೇಳಬೇಕಾದುದನ್ನೆಲ್ಲ ಹೇಳಿದೆ. ಅನುಭಾವಕ್ಕೆ ಶರಣರು ಕೊಟ್ಟ ಮಹತ್ವ ಅಷ್ಟಿಷ್ಟಲ್ಲ. ಅದೂ ಸಹ ನಮ್ಮಂಥಹವರ ಮಾತು-ಮನಗಳಿಗೆ ಮೀರಿದ್ದು. ವಾಸ್ತವವಾಗಿ 'ಅನುಭಾವ'ದ ಬಗೆಯನ್ನು 'ಶಬ್ದ ಸಂಭ್ರಮ'ದಲ್ಲಿ ಹಿಡಿದಿಡಲಾಗದು.

ಅನುಭಾವ ವೇದಿಕೆಯ ವಾದ-ಸಂವಾದದ ವಸ್ತುವಲ್ಲ; ಅದು ಹೃದಯ ಸಂಬಂಧದ ಸಂವೇದನೆ; ಆತ್ಮಾನುಸಂಧಾನ. ಅದಕ್ಕೇ "ಅನುಭಾವಿಗಳ ಅನುಭಾವವ ತೋರಿ ಎನ್ನ ಒಡಲನುಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನ" ಎಂದು ಹಂಬಲಿಸಿದ್ದಾಳೆ ಅಕ್ಕಮಹಾದೇವಿ!

..............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 2

# ಕಾರ್ಯಸರಣಿ

ಶಿಬಿರಾಗ್ನಿ ಉದಂತ ಸಂ – 5

## ರಾತ್ರಿಯ ವೇಳೆಯ ಚಟುವಟಿಕೆಗಳು

ಸ್ಕೌಟುಗಳು ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ, ತಮ್ಮ ದಾರಿಯನ್ನು ಸುಲಭವಾಗಿ ಕಂಡು ಕೊಳ್ಳುವಂತಿರಬೇಕು. ಅವರು ಆಗಾಗ್ಗೆ ಅಭ್ಯಾಸ ಮಾಡಿಕೊಳ್ಳದೆ ಹೋದರೆ, ರಾತ್ರಿಯ ವೇಳೆಯಲ್ಲಿ ದಾರಿ ತಪ್ಪುವುದುಂಟು. ಆಗ ದೂರವು ಹೆಚ್ಚಾದಂತೆ ಭಾಸವಾಗುತ್ತದೆ; ಹೆಗ್ಗುರುತುಗಳು ಸುಲಭವಾಗಿ ಕಂಡುಬರುವುದಿಲ್ಲ. ಆಕಸ್ಮಿಕವಾಗಿ ಒಣ ಪುರಳೆಗಳನ್ನು ತುಳಿದೋ, ಕಲ್ಲುಗಳನ್ನು ಎಡವಿಯೋ, ಹಗಲು ಹೊತ್ತಿಗಿಂತಲೂ ರಾತ್ರಿಯ ಸಮಯದಲ್ಲಿ ಗಾಬರಿಗೊಳ್ಳುವುದು ಹೆಚ್ಚು.

ರಾತ್ರಿಯ ವೇಳೆಯಲ್ಲಿ ಶತ್ರುವಿಗಾಗಿ ಹೊಂಚುಹಾಕುವಾಗ, ನಿಮ್ಮ ಕಣ್ಣುಗಳಿಗಿಂತಲೂ, ಕಿವಿಗಳನ್ನು ಹೆಚ್ಚಾಗಿ ನಂಬಬೇಕಾಗುತ್ತದೆ. ನಿಮ್ಮ ಮೂಗೂ ಸಹ ನಿಮಗೆ ಸಹಾಯಮಾಡುತ್ತದೆ. ಏಕೆಂದರೆ ಸ್ಕೌಟು ತನ್ನ ಘ್ರಾಣ ಶಕ್ತಿಗೆ ಒಳ್ಳೆಯ ಶಿಕ್ಷಣ ಅಭ್ಯಾಸ ಕೊಟ್ಟಿರುತ್ತನೆ. ಹೊಗೆಸೊಪ್ಪು ಸೇದದೆ ತನ್ನ ಘ್ರಾಣಶಕ್ತಿಯನ್ನು ಕಾಪಾಡಿಕೊಂಡಿರುವವನು. ತನ್ನ ಶತ್ರುವನ್ನು ದೂರದಿಂದಲೇ ವಾಸನೆ ಹಿಡಿಯಬಹುದು. ನಾನೇ ಅನೇಕ ವೇಳೆಗಳಲ್ಲಿ ಆ ಕೆಲಸ ಮಾಡಿದ್ದೇನೆ.

ರಾತ್ರಿಯ ವೇಳೆ ಗಸ್ತು ಹೋಗುವಾಗ. ಸ್ಕೌಟುಗಳು ಹಗಲಿನಂತೆ ದೂರದೂರವಿರದೆ. ಒಬ್ಬರಿಗೊಬ್ಬರು ಹತ್ತಿರ ಹತ್ತಿರ ಇರುತ್ತಾರೆ. ಅಡವಿ ಪ್ರದೇಶದಂತಹ ಕತ್ತಲು ಕವಿದ ಪ್ರದೇಶವಾದರೆ ಮುಂದಿನವರ ದಂಡದ ತುದಿಯನ್ನು ಹಿಂದಿನವರು ಹಿಡಿದುಕೊಂಡು ಒಬ್ಬರಿಗೊಬ್ಬರು ಸಂಪರ್ಕವನ್ನಿಟ್ಟುಕೊಂಡಿರುತ್ತಾರೆ.

ಒಬ್ಬರೇ ಕತ್ತಲಿನಲ್ಲಿ ದಾರಿ ಕಂಡುಕೊಳ್ಳಬೇಕಾದ ಸಂದರ್ಭದಲ್ಲಿ ಸ್ಕೌಟ್ ದಂಡವು ದಾರಿಯನ್ನು ಗ್ರಹಿಸಲೂ, ಅಡ್ಡಬಂದ ಕಲ್ಲು ಕಡ್ಡಿಗಳನ್ನು ಪಕ್ಕಕ್ಕೆ ಸರಿಸಲೂ ಸಹಾಯವಾಗುತ್ತದೆ.

ಸ್ಕೌಟುಗಳು ಬೇರೆ ಬೇರೆಯಾಗಿ ಕೆಲಸ ಮಾಡಬೇಕಾಗಿಬಂದಾಗ, ಆಗಾಗ್ಗೆ ತಮ್ಮ ಪೆಟ್ರೋಲ್ ಕೂಗನ್ನು ಕೊಟ್ಟು ಸಂಪರ್ಕವನ್ನಿಟ್ಟುಕೊಳ್ಳಬೇಕಾಗುತ್ತದೆ.

ಎಲ್ಲಾ ಸ್ಕೌಟುಗಳೂ ನಕ್ಷತ್ರಗಳ ಸಹಾಯದಿಂದ, ತಮ್ಮ ದಾರಿಯನ್ನು ಕಂಡುಕೊಳ್ಳಲು ತಿಳಿದಿರಬೇಕು.

## ದಾರಿಯನ್ನು ಕಂಡುಕೊಳ್ಳುವುದು

ರೆಡ್ ಇಂಡಿಯನ್ ಸ್ಕೌಟುಗಳು, ಹೊಸ ಜಾಗಗಳಲ್ಲಿ, ತನ್ನ ದಾರಿಯನ್ನು ಕಂಡುಕೊಳ್ಳುವವನಿಗೆ "ಮಾರ್ಗದರ್ಶನಕ"ನೆಂದು ಕರೆಯುತ್ತಿದ್ದರು. ಆ ರೀತಿ ಕರೆಸಿಕೊಳ್ಳುವುದು, ಒಂದು ದೊಡ್ಡಗೌರವವೆಂದು ಭಾವಿಸುತ್ತಿದ್ದರು.

ಅನೇಕ ಕೋಮಲಪಾದ (ಪ್ರವೇಶಕರು)ಗಳು. ವೆಲ್ಡ್ ಬಯಲಿನಲ್ಲಿ ಅಥವಾ ದಟ್ಟವಾದ ಅಡವಿಯಲ್ಲಿ ದಾರಿ ತಪ್ಪಿಹೋಗಿ, ಮತ್ತೆ ಅವರು ಕಂಡುಬಂದಿಲ್ಲ. ಕಾರಣ ಅವರಿಗೆ ಸ್ಕೌಟಿಂಗ್ ತಿಳಿದಿರಲಿಲ್ಲ ಮತ್ತು ಅವರಿಗೆ ಭೌಗೋಳಿಕ ಪ್ರಜ್ಞೆ ಇರಲಿಲ್ಲ ಎನ್ನಬೇಕು.

ಒಂದು ಸಂದರ್ಭದಲ್ಲಿ ಮೆಟಾಬಿಲಿಲ್ಯಾಂಡ್ ಮೂಲಕವಾಗಿ ಹಾದು ಹೋಗುತ್ತಿದ್ದ ಕೋಚ್ ಗಾಡಿಯಿಂದ ಒಬ್ಬ ವ್ಯಕ್ತಿಯು ಇಳಿದನು. ಆ ಸ್ಥಳದಲ್ಲಿ, ಗಾಡಿಯನ್ನು ಎಳೆಯಲು ಕಟ್ಟಿದ್ದ ಹೇಸರಗತ್ತೆಗಳನ್ನು ಬದಲಾಯಿಸಿಕೊಳ್ಳುತ್ತಿದ್ದರು. ಗಾಡಿಯಿಂದ ಇಳಿದ ಆ ವ್ಯಕ್ತಿಯು, ಹಾಗೆಯೇ ಅಡ್ಡಾಡಿಕೊಂಡು ನೆರೆಯ ಕಾಡು ಪ್ರದೇಶವನ್ನು ಹೊಕ್ಕನು. ಗಾಡಿಯು ಹೊರಡಲು ತಯಾರಾದ ಕೂಡಲೇ, ಚಾಲಕನು ಆ ವ್ಯಕ್ತಿಗಾಗಿ ಎಲ್ಲಾ ದಿಕ್ಕುಗಳಲ್ಲಿಯೂ ಕೂಗುಹಾಕಿದನು, ಹುಡುಕಿದನು. ಆ ಪ್ರದೇಶದಲ್ಲಿ ಜಾಡು ಹುಡುಕುವುದು ಬಹಳ ಕಷ್ಟಕರವಾದುದು. ಆದರೂ ಜಾಡು ಹಿಡಿದು, ಆ ವ್ಯಕ್ತಿಯ ಹೆಜ್ಜೆಗುರುತುಗಳನ್ನನುಸರಿಸಿ, ಸ್ವಲ್ಪದೂರ ಹೋದರು. ವ್ಯಕ್ತಿಯು ಸಿಗಲಿಲ್ಲ. ಹೊರಡಲು ವೇಳೆಯಾದುದರಿಂದ, ಅವನನ್ನು ಹುಡುಕಲು ಬೇರೆಯವರಿಗೊಪ್ಪಿಸಿ ಕೋಚ್ ಗಾಡಿಯು ಪ್ರಯಾಣವನ್ನು ಮುಂದುವರೆಸಿತು.

ಹಲವು ವಾರಗಳು ಕಳೆದ ಬಳಿಕ, ಕೋಚ್ ಇಳಿದ ಸ್ಥಳದಿಂದ ಸುಮಾರು 15 ಮೈಲಿಗಳಾಚೆ, ಆ ವ್ಯಕ್ತಿಯು ಸತ್ತು ಬಿದ್ದಿರುವುದನ್ನು ಪತ್ತೆ ಹಚ್ಚಿದರು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227


**Karnataka Scout & Guide News Magazine**

Wishes its Readers, Subscribers, Advertisers, Well Wishers
Cubs, Bulbuls, Scouts, Guides, Rovers & Rangers
Unit Leaders, Parents, Members of the Movement

*A Very Happy & Prosperous New Year - 2010*






**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



ದಿನಾಂಕ 15,16 ಮತ್ತು 17ನೇ ಡಿಸೆಂಬರ್ 2009ರಂದು ದಕ್ಷಿಣ ಕನ್ನಡ ಜಿಲ್ಲೆ ಉಪ್ಪಿನಂಗಡಿಯಲ್ಲಿ ನಡೆದ ಜಿಲ್ಲಾ ಮಟ್ಟದ ಮೇಳದಲ್ಲಿ ಶ್ರೀ ಸುಬ್ರಮಣ್ಯ ಮಠದ ಶ್ರೀ ಶ್ರೀ ವಿದ್ಯಾಪ್ರಸನ್ನತೀರ್ಥ ಸ್ವಾಮಿಜಿಯವರು ಮಾತನಾಡುತ್ತಿರುವುದು. ಶ್ರೀ ಐ.ಎ. ಕೈರನ್ನ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಶೇಷಶಯನ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀ ಅಬ್ರಹಾಂ ವರ್ಗೀಸ್, ಅಧ್ಯಕ್ಷರು ಸ್ಥಳೀಯ ಸಂಸ್ಥೆ, ಶ್ರೀ ಯು. ಗೋಪಾಲಕೃಷ್ಣ ಭಟ್, ಜಿಲ್ಲಾ ಕಾರ್ಯದರ್ಶಿ, ಶ್ರೀ ಬಿ.ಜಿ. ಬಾಗೇವಾಡಿ, ಶಿಕ್ಷಣ ಸಮನ್ವಯಾಧಿಕಾರಿ, ಶ್ರೀ ಐತಪ್ಪ ನಾಯ್ಕ, ಕಾರ್ಯಾಧ್ಯಕ್ಷ ಹಾಗೂ ಇತರರನ್ನು ಕಾಣಬಹುದು.



ದಿನಾಂಕ 8 ರಿಂದ 12 ಜನವರಿ 2010ರವರೆಗೆ ರಾಜ್ಯ ತರಬೇತಿ ಕೇಂದ್ರ, ಡಾ. ಆನಿಬೆಸೆಟ್ ಪಾರ್ಕ್‌ನಲ್ಲಿ ನಡೆದ ಆಯುಕ್ತರ ಮೂಲ ತರಬೇತಿಯಲ್ಲಿ ಭಾಗವಹಿಸಿದ ಅಭ್ಯರ್ಥಿಗಳು ರಾಜ್ಯ ಮುಖ್ಯ ಆಯುಕ್ತರೊಂದಿಗೆ.



ದಿನಾಂಕ 10–01–2010ರಂದು ರಾಯಚೂರಿನಲ್ಲಿ ನಡೆದ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಭಾಗವಹಿಸಿದ ಶ್ರೀ ಸಯ್ಯದ್ ಯಾಸಿನ್, ಶಾಸಕರು, ಜಿಲ್ಲಾಧಿಕಾರಿಗಳಾದ ಶ್ರೀ ಅನ್ಬುಕುಮಾರ್, ಐ.ಎ.ಎಸ್., ಹಾಗೂ ಸ್ಕೌಟರ್ ಮತ್ತು ಗೈಡ್ಸ್ ಗಳನ್ನು ಕಾಣಬಹುದು.



ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರದಲ್ಲಿ ನಡೆದ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕರ ಕಾರ್ಯಾಗಾರವನ್ನು ಶ್ರೀ ವಿ.ಎಸ್. ಹೆಗಡೆ, ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿ ಉದ್ಘಾಟಿಸುತ್ತಿರುವುದು. ಶ್ರೀ ಗಣಪತಿ ಕಟ್ಟಿನಕೆರೆ, ತಹಶೀಲ್ದಾರ್, ಶ್ರೀ ಬಿ.ವಿ. ನಾಯ್ಕ, ಕ್ಷೇತ್ರ ಶಿಕ್ಷಣಾಧಿಕಾರಿ ಹಾಗೂ ಇತರರನ್ನು ಕಾಣಬಹುದು.

Regd as News Paper (Magazine) No : CPMG/KA/BGW-549/2009-11 Permitted to Post under WPP System
Vide No.: WPP-87 of SSP, Bangalore West Posted at: Bangalore City H.P.O. on 30-01-2010







Activities of

33rd State level Cub & Bulbul Utsav
held at the Silas International School Campus, Udupi
from 27th to 31st December 2009.










Activities of
The National Youth Day
& Birth Day of Swami Vivekananda
held on 12th January 2010 at State Headquarters, Fort, Bangalore.



If not delivered, please return to :

**THE EDITOR**, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine